ಇಂದ್ರಾದಿ ದಿಕ್ಪಾಲಕರಿಗೂ ಪೂಜೆಯನ್ನು ಮಾಡಿ ಪ್ರಧಾನಾಚಾರ್ಯರಿಗೆ ಸಮೃದ್ಧವಾಗಿ ಕಾಣಿಕೆಯನ್ನು ಸಮರ್ಪಿಸಬೇಕು. ಪ್ರತಿಷ್ಠಾಪನೆಯ ದಿನಗಳಲ್ಲಿ ನಾಯಿ ಮೊದಲಾದ ಪಶುಗಳಿಗೆ ಮಾತ್ರವಲ್ಲದೆ ಎಲ್ಲ ವರ್ಗದ ಜನಸಾಮಾನ್ಯರಿಗೂ ಅನ್ನಸಂತರ್ಪಣೆಯನ್ನು ನಡೆಸಬೇಕು. ಪ್ರತಿಷ್ಠೆಯ ನಂತರ ೭ ದಿನಗಳಲ್ಲಿ ಆ ಸ್ಥಳದಲ್ಲಿ ವೇದಗಾನ, ಪುರಾಣಪ್ರವಚನ, ಸಂಗೀತಗೋಷ್ಠಿ, ಮೊದಲಾದ ಕಾರ್ಯಕ್ರಮಗಳನ್ನು ಆಯೋಜಿಸಬೇಕು.

## ಜೀರ್ಣೋದ್ಧಾರ

ದೇವಸ್ಥಾನದ ಜೀರ್ಣೋದ್ಧಾರದ ಪ್ರಸಂಗದಲ್ಲಿ ಪ್ರತಿಮೆಯನ್ನು ಕದಲಿಸುವ ಪ್ರಸಂಗ ಒದಗಿದಾಗ ತತ್ತ್ವದೇವತಾಮಂತ್ರಗಳನ್ನು ವ್ಯುತ್ಕ್ರಮವಾಗಿ ಪಠಿಸಿ ಭಗವದ್ವಿಭೂತಿಯನ್ನು ಪ್ರತಿಮೆಯಲ್ಲಿ ಸಂಕೋಚಗೊಳಿಸಬೇಕು. ಅನಂತರ ಪ್ರತಿಷ್ಠಾಕಾಲದಲ್ಲಿ ನಡೆಸಿದ ವೈಭವದ ಕನಿಷ್ಠ ನಾಲ್ಕನೆಯ ಒಂದು ಭಾಗ ದ್ರವ್ಯವನ್ನು ವಿನಿಯೋಗಿಸಿ ವಿಧ್ಯುಕ್ತಕ್ರಮದಿಂದ ಪ್ರತಿಮಾ ಪ್ರತಿಷ್ಠೆಯನ್ನು ನಡೆಸಬೇಕು. ಗರ್ಭಗುಡಿಯ ಒಳಗೆ ಕಳ್ಳನಾಗಲಿ, ಮಾಂಸಭಕ್ಷಕನಾಗಲಿ, ಇನ್ನೊಂದು ಹೆಣ್ಣನ್ನು ಭೋಗಿಸುವ ಚಪಲನಾದ ಪತಿತನಾಗಲಿ, ಮುಟ್ಟಾದ ಹೆಂಗಸಾಗಲಿ ಪ್ರವೇಶಿಸಿದಲ್ಲಿ ದೇವಸ್ಥಾನದ ಗರ್ಭಗುಡಿಯ ಶುಚಿತ್ವಕ್ಕಾಗಿ ಕಲಶಸ್ಥಾಪನಪೂರ್ವಕವಾಗಿ ಮತ್ತೆ ಪ್ರಾಯಶ್ಚಿತ್ತರೂಪವಾಗಿ ಅಭಿಷೇಕವನ್ನು ನಡೆಸಬೇಕು. ಈ ಸಂದರ್ಭಗಳಲ್ಲಿ ವಿಷ್ಣುಗಾಯತ್ರಿ ಮಂತ್ರದಿಂದ ಹತ್ತು ಸಾವಿರಕ್ಕೆ ಕಮ್ಮಿ ಇಲ್ಲದಂತೆ ಅಗ್ನಿಮುಖದಿಂದ ಪರಮಾತ್ಮನ ಆರಾಧನೆಯನ್ನು ನಡೆಸಬೇಕು.

## ದುರ್ಗೆ, ರುದ್ರ ಮೊದಲಾದ ದೇವತೆಗಳ ಪ್ರತಿಷ್ಠಾ ಕ್ರಮ

ದುರ್ಗಾ, ರುದ್ರ, ಸ್ಕಂದ, ಗಣಪತಿ ಮೊದಲಾದ ಇತರ ದೇವತೆಗಳನ್ನು ಪ್ರತಿಷ್ಠಾಪನೆ ಮಾಡಿದಾಗ ಆಯಾ ದೇವತೆಗಳ ಜೊತೆಗೆ ಪ್ರತಿಮೆಯಲ್ಲಿ ಶ್ರೀಹರಿಯನ್ನು ಧ್ಯಾನಿಸಬೇಕು. ಶ್ರೀಹರಿಯ ಸನ್ನಿಧಾನವು ತತ್ತ್ವಾಭಿಮಾನಿ ದೇವತೆಗಳ ವಿಶೇಷ ಸನ್ನಿಧಿಯಿಂದ ಜಾಗೃತವಾಗುವುದು.

**ತತ್ತ್ವದೇವತೆಗಳು**

ಪ್ರತಿಮೆಯಲ್ಲಿ ಅನುಸಂಧೇಯವಾದ ೩೨ ತತ್ತ್ವಗಳ ಚಿಂತನೆ ಹಾಗೂ ಅದರ ಅಭಿಮಾನಿ ದೇವತೆಗಳ ಅನುಸಂಧಾನ ಆವಶ್ಯಕವಾಗಿದೆ. ಪುರುಷತತ್ತ್ವ, ಅವ್ಯಕ್ತ-ತತ್ತ್ವ, ಮಹತ್ತತ್ತ್ವ, ಅಹಂಕಾರತತ್ತ್ವ, ಹತ್ತು ಇಂದ್ರಿಯಗಳು, (5+10=15) ಶಬ್ದರೂಪರಸಗಂಧವೇ ಮೊದಲಾದ ಐದು ತನ್ಮಾತ್ರೆಗಳು, ಪಂಚಮಹಾಭೂತ-ಗಳು, (15+10=25) ಈ ತತ್ತ್ವಗಳಿಗೆ ಕಾಲ, ಮಾಯೆ, ನಿಯತಿ, ಮತಿ, ವಿದ್ಯೆ, ಕಲಾ, ಪ್ರವೃತ್ತಿ ಎಂಬ ೭ ತತ್ತ್ವಗಳು ಸೇರಿ ೩೨ ತತ್ತ್ವಗಳೆಂದು ಪರಿಗಣಿತವಾಗಿವೆ. ತತ್ತ್ವಾಭಿಮಾನಿಗಳಾದ ಬ್ರಹ್ಮ, ರುದ್ರ, ಇಂದ್ರ, ಕಾಮ ಮೊದಲಾದ ದೇವತೆ-ಗಳನ್ನು ಪ್ರತಿಮೆಯ ಆಯಾ ಅಂಗಾಂಗಗಳಲ್ಲಿ ಯಥೋಚಿತವಾಗಿ ಧ್ಯಾನಿಸಿ, ಪ್ರತಿಮೆಯಲ್ಲಿ ಭಗವಂತನ ಸನ್ನಿಧಾನವು ಹೆಚ್ಚಾಗುವಂತೆ ಶ್ರದ್ಧೆಯಿಂದ ಭಗ-ವಂತನನ್ನು ಆರಾಧಿಸಬೇಕು.

## ಚತುರ್ಥಾಧ್ಯಾಯ ಸಾರ

ಭಗವತ್ಪಾದರು ಈ ತಂತ್ರಸಾರಸಂಗ್ರಹದಲ್ಲಿ ೭೧ ಅಪೂರ್ವ ಮಂತ್ರಗಳನ್ನು ಸಾಧಕರ ಉಪಾಸನೆಗಾಗಿ ಅನುಗ್ರಹಿಸಿದ್ದಾರೆ. ಇಲ್ಲಿ ಹೇಳಿರುವ ಮಂತ್ರಗಳೆಲ್ಲವೂ ದೃಷ್ಟ ಹಾಗೂ ಅದೃಷ್ಟರೂಪ ಫಲವನ್ನು ನೀಡುವುದರಲ್ಲಿ ಅತ್ಯಂತ ದಕ್ಷ-ವಾಗಿವೆ. ಪ್ರತಿಯೊಂದು ಮಂತ್ರವನ್ನು ಉಚ್ಚರಿಸುವಾಗ ಋಷಿ, ದೇವತೆ, ಛಂದಸ್ಸು, ಧ್ಯೇಯರೂಪಗಳನ್ನು ವಿವರಿಸುವ ಶ್ರೀಮದಾಚಾರ್ಯರು ಅದರಿಂದ ಉಂಟಾಗುವ ಮಹಾಫಲವನ್ನು ಕೂಡ ನಿರೂಪಿಸಿದ್ದಾರೆ. ಒಂದೇ ದೇವತೆಗೆ ಸಂಬಂಧಿಸಿದಂತೆ ಏಕಾಕ್ಷರ, ಷಡಕ್ಷರಮಂತ್ರ ಹಾಗೂ ಅನೇಕಾಕ್ಷರಗಳುಳ್ಳ ವಿಶಿ-ಷ್ಟಫಲಕ್ಕೋಸ್ಕರ ನಿರೂಪಿಸಿದ ಮಂತ್ರಗಳು ಇಲ್ಲಿ ಮನನೀಯವಾಗಿವೆ. ಭಗ-ವತ್ಪಾದರೇ ವಿವರಿಸುವಂತೆ ಈ ಎಲ್ಲ ಮಂತ್ರಗಳಲ್ಲಿ ಶ್ರೀವೇದವ್ಯಾಸಮಂತ್ರ, ಕೃಷ್ಣಷಡಕ್ಷರಮಂತ್ರ, ಅತ್ಯಂತ ಶ್ರೇಷ್ಠವಾಗಿವೆ. ಭಕ್ತರ ಎಲ್ಲ ಬಗೆಯ ಅಭೀಷ್ಟ-ಗಳನ್ನು ಇವು ನೆರವೇರಿಸಬಲ್ಲವು. ವೇದೋಕ್ತ ಧನ್ವಂತರಿಮಂತ್ರ, ತಂತ್ರಸಾ-ರೋಕ್ತ ಧನ್ವಂತರಿಮಂತ್ರಗಳು ಆರೋಗ್ಯ, ದೀರ್ಘಾಯುಷ್ಯ, ಸಂಸಾರನಿವೃತ್ತಿ-ರೂಪ ಮಹಾಫಲದಾಯಕವೆಂಬುದನ್ನು ಭಗವತ್ಪಾದರು ಒತ್ತಿ ಹೇಳಿದ್ದಾರೆ.

### ಸಿದ್ಧಿಯ ಉಪಾಯಗಳು

ವಿದ್ಯೆಯ ಪ್ರಾಪ್ತಿಗಾಗಿ ಪ್ರತಿದಿನವೂ ವೇದವ್ಯಾಸಮಂತ್ರದಿಂದ ೧೦೦ ಬಾರಿಗೆ ಅಭಿಮಂತ್ರಿತವಾದ ಜಲವನ್ನು ಪಾನಮಾಡಬೇಕು ಅಥವಾ ಬಜೆಬೇರು, ತುಳಸಿ, ಒಂದೆಲಗ, ತೇದ ಬಂಗಾರ, ಮೊದಲಾದ ಪದಾರ್ಥಗಳನ್ನು ಅಭಿಮಂತ್ರಿಸಿ ಸ್ವೀಕರಿಸಬಹುದು. ಯಾವುದೇ ಮಂತ್ರಜಪವು ಹರಿಪ್ರೀತಿರೂಪ ಉದ್ದೇಶವನ್ನು ಹೊಂದಿದಲ್ಲಿ ಮಹಾಫಲದಾಯಕವಾಗುವುದು. ಅದರೊಡನೆ ಭಕ್ತಿ, ಸದಾಚಾರಗಳು ಅಂಗವಾಗಿ ಜಾಗೃತವಿರಬೇಕು.

### ಗುರು ಸ್ವರೂಪ

ಶ್ರೀಹರಿಗುರುಭಕ್ತನಾದ ಸದಾಚಾರಸಂಪನ್ನನಾದ ವ್ಯಕ್ತಿಯನ್ನು ವಿದ್ಯೋಪದೇಶಕನನ್ನಾಗಿ ಪಡೆದು ಅವನಿಂದ ಸಂಪ್ರದಾಯರಹಸ್ಯ, ತತ್ತ್ವಜ್ಞಾನಗಳನ್ನು ಪಡೆಯಬೇಕು. ಶ್ರೇಷ್ಠರಾದ ಸಂಪ್ರದಾಯವಿದರು, ಅನುಷ್ಠಾನಶೀಲರು, ತತ್ತ್ವಜ್ಞಾನಿಗಳೂ ಆದ ಆಚಾರ್ಯರು ಇರುವಾಗ ಮಧ್ಯಮಮಟ್ಟದ ಅಥವಾ ಅಧಮರಾದ ಆಚಾರ್ಯರನ್ನು ಸ್ವೀಕರಿಸಬಾರದು.

### ಉಪಾಸನೆಯ ಎರಡು ಮುಖಗಳು

ಮುಕ್ತಿಗೆ ಶ್ರೀಹರಿಪ್ರಸಾದವೇ ಮುಖ್ಯ ಕಾರಣ. ಹರಿಪ್ರಸಾದಕ್ಕೆ ನಿರ್ಮಲಭಕ್ತಿಯೊಂದು ಮಾತ್ರವೇ ಸಾಧನವಾಗಿದೆ. ಭಕ್ತಿಯಿಂದ ಸಂತುಷ್ಟನಾದ ಪರಮಾತ್ಮನು ಸಾಧಕನಿಗೆ ತನ್ನ ಮಂಗಲರೂಪವನ್ನು ತೋರುವನು. ಇದನ್ನೇ ಅಪರೋಕ್ಷವೆನ್ನುವರು. ಇದು ಸಂತತವಾದ ಧ್ಯಾನದಿಂದ ಸಾಧ್ಯವಾಗಿದೆ. ಧ್ಯಾನವು ಮನನದಿಂದ ಮಾತ್ರವೇ ಸಾಧ್ಯ. ಮನನಕ್ಕಾಗಿ ಸಚ್ಛಾಸ್ತ್ರಶ್ರವಣವು ಅತ್ಯಂತ ಅನಿವಾರ್ಯವಾಗಿದೆ. ಪಾಠಪ್ರವಚನ ಮತ್ತು ಧ್ಯಾನವೆಂಬುದಾಗಿ ಉಪಾಸನೆಯು ಎರಡು ಮುಖವಾಗಿ ಪ್ರವಹಿಸುವ ಹಿನ್ನೆಲೆಯಲ್ಲಿ ಈ ಎರಡೂ ನಮ್ಮ ಜೀವನದಲ್ಲಿ ರಕ್ತಗತವಾಗಬೇಕು.

ಧ್ಯಾನವು ಸರ್ವಶ್ರೇಷ್ಠವಾದರೂ ಧ್ಯಾನ ಮಾಡುವ ವ್ಯಕ್ತಿಗೆ ಮಾತ್ರವೇ ಅದರಿಂದ ಮಹಾಫಲವಿರುವುದರಿಂದ ಪಾಠಪ್ರವಚನ ನಡೆಸಿದಾಗ ಅದರಿಂದ ನೂರಾರು ಸಾತ್ವಿಕ ಚೇತನರು ಉದ್ಧೃತರಾಗುವ ಹಿನ್ನೆಲೆಯಲ್ಲಿ ನಿಷ್ಕಾಮನೆಯಿಂದ

ಪಾಠಪ್ರವಚನವನ್ನು ನಡೆಸಿದಾಗ ಅದು ಧ್ಯಾನಕ್ಕಿಂತಲೂ ಕೂಡ ಮಿಗಿಲೆನಿಸುವುದು.

ಸಂತತವಾದ ಧ್ಯಾನದಿಂದ ಹರಿಯ ಸಾಕ್ಷಾತ್ಕಾರವಾಗುವುದಾದರೂ ಧ್ಯಾನಕ್ಕೆ ಯಮ, ನಿಯಮ, ಆಸನ, ಪ್ರಾಣಾಯಾಮ ಎಂಬುದಾಗಿ ನಾಲ್ಕು ಪ್ರಧಾನ ಅಂಗಗಳಿದ್ದಾವೆ. ಇನ್ನೊಬ್ಬರನ್ನು ಹಿಂಸಿಸದಿರುವುದು, ಸುಳ್ಳಾಡದಿರುವುದು, ಕದಿಯದಿರುವುದು, ಪರಸ್ತ್ರೀಸಂಗವನ್ನು ತೊರೆಯುವುದು, ಯಾಚನೆ ಮಾಡದಿರುವುದು ಇವಿಷ್ಟು ಸಮಷ್ಟಿಯಾಗಿ ಯಮ ಎನಿಸಿವೆ. ದೇಹ ಮನಸ್ಸುಗಳನ್ನು ನಿರ್ಮಲವಾಗಿರಿಸಿಕೊಳ್ಳುವುದು, ತೃಪ್ತವಾದ ಬದುಕು, ಕಠಿಣ ವ್ರತನಿಯಮಗಳ ಆಚರಣೆ, ಪಾಠಪ್ರವಚನ, ಹರಿಪೂಜೆಯು ನಿಯಮ ಎನಿಸಿದೆ. ಸ್ವಸ್ತಿಕ, ಭದ್ರಕ, ವಜ್ರಕ, ವೀರಪದ್ಮಾಸನಗಳೆಂಬುದಾಗಿ ಆಸನಗಳು ಅನೇಕ ಬಗೆಯಾಗಿವೆ.

**ಪ್ರಾಣಾಯಾಮ**

ಬಲಮೂಗಿನಿಂದ ಗಾಳಿಯನ್ನು ಹೊರಬಿಟ್ಟು, ಎಡಮೂಗಿನಿಂದ ಶುದ್ಧವಾದ ಗಾಳಿಯನ್ನು ಒಳ ಸೆಳೆದು ಸುಷುಮ್ನಾನಾಡಿಯಲ್ಲಿ ಅದನ್ನು ಹಿಡಿದಿಡುವುದೇ ಪ್ರಾಣಾಯಾಮ ಎನಿಸಿದೆ. ೩೬ ಓಂಕಾರಗಳಿಂದ ಅಥವಾ ೨೪, ೧೨ ಓಂಕಾರಗಳಿಂದ ಪ್ರಾಣಾಯಾಮವನ್ನು ಮಾಡಬಹುದು. ಅಥವಾ ಆಯಾ ಮಂತ್ರಗಳಿಂದಾಗಲೀ, ೧೦ ಓಂಕಾರಗಳಿಂದ ಕೂಡಿದ ಗಾಯತ್ರೀ ಮಂತ್ರದಿಂದಾಗಲೀ, ಪ್ರಾಣಾಯಾಮವನ್ನು ಮಾಡುವುದು ಅತ್ಯಂತ ಶ್ರೇಷ್ಠವೆನಿಸಿದೆ.

ರೇಚಕ, ಪೂರಕ, ಕುಂಭಕವೆಂಬುದಾಗಿ ಪ್ರಾಣಾಯಾಮದ ಅಂಶಗಳು. ರೇಚಕವೆಂದರೆ ಒಳಗಿರುವ ಗಾಳಿಯನ್ನು ಹೊರಗೆ ಹಾಕುವುದು. ಶುದ್ಧವಾದ ಗಾಳಿಯನ್ನು ಒಳಗೆ ಸ್ವೀಕರಿಸುವ ಪ್ರಕ್ರಿಯೆಯನ್ನು ಪೂರಕವೆನ್ನುತ್ತಾರೆ. ಒಳಸೆಳೆದ ಗಾಳಿಯನ್ನು ಸುಷುಮ್ನಾನಾಡಿಯಲ್ಲಿ ಬಂಧಿಸುವುದೇ ಕುಂಭಕವೆನಿಸಿದೆ. ರೇಚಕವನ್ನು ೧೬ ಮಾತ್ರೆಗಳ ಕಾಲ ನಡೆಸಿದರೆ ೩೨ ಮಾತ್ರೆಗಳಷ್ಟು ಕಾಲ ಪೂರಕವನ್ನು ನಡೆಸಬೇಕು. (ಗಾಳಿಯನ್ನು ಸಾವಕಾಶವಾಗಿ ಒಳಗೆ ಸ್ವೀಕರಿಸಬೇಕು) ೬೪ ಮಾತ್ರೆಗಳಷ್ಟು ಕಾಲ ಗಾಳಿಯನ್ನು ಹಿಡಿದಿಡಬೇಕು. ಇದು ಕುಂಭಕವೆನಿಸಿದೆ. ಮಾತ್ರೆ ಎಂದರೆ ಹ್ರಸ್ವವರ್ಣವನ್ನು ಉಚ್ಚರಿಸುವಷ್ಟು ಕಾಲ.

ನಾಡೀವಿಜ್ಞಾನ - ಕಂದವಿವರ

ಪ್ರತಿಯೊಬ್ಬನ ದೇಹ ಅವನ ಅಂಗುಲದಿಂದ ೯೬ ಅಂಗುಲ ಇರುತ್ತದೆ. ನಾಭಿಯಿಂದ ಕೆಳಗಿನ ಗುದ-ಧ್ವಜಗಳ ಮಧ್ಯಭಾಗ ೯ ಅಂಗುಲ ವ್ಯಾಪ್ತಿಯುಳ್ಳ ನಾಡಿಗಳ ಉಗಮಸ್ಥಾನ ಕಂದ ಎನಿಸಿದೆ. ಈ ಕಂದದಿಂದ ನಡುನೆತ್ತಿಯವರೆಗೆ ನೇರವಾಗಿ ಪ್ರವಹಿಸಿದ ನಾಡಿ ಸುಷುಮ್ನಾ.

ಈ ಕಂದದಲ್ಲಿ ೧೨ ಅಚ್ಚುಗಳುಳ್ಳ ಕಾಲಚಕ್ರ ಇದೆ. ಇದಕ್ಕೆ ದ್ವಾದಶ ಮಾಸಾಭಿಮಾನಿಗಳು ಮತ್ತು ವಿಷ್ಣುವಿನ ೧೨ ರೂಪಗಳು ಮುಖ್ಯ ಅಭಿಮಾನಿಗಳು. ಈ ಚಕ್ರಗಳಲ್ಲಿ ಜೀವನ ಸಂಚಾರವಾಗುತ್ತದೆ.

ಕಂದಸ್ಥಾನಂ ಮನುಷ್ಯಾಣಾಂ ದೇಹಮಧ್ಯಂ ನವಾಂಗುಲಮ್.
ತತ್ರ ಚಕ್ರಂ ದ್ವಾದಶಾರಂ ಆಹುರ್ಮಾಸಚರಾಣಿ ತು.
ವಿಷ್ಣ್ವಾದಿಮೂರ್ತಯಸ್ತೇಷು ದ್ವಾದಶ ದ್ವಾದಶಸ್ವಪಿ.
ಅಹಂ ತತ್ರ ಸ್ಥಿತಂ ಚಕ್ರಂ ಭ್ರಾಮಯಾಮಿ ಸ್ವಮಾಯಯಾ.

ಕುಂಡಲಿನೀ

ನಾಭಿಯ ಕೆಳಭಾಗ ಮಧ್ಯಭಾಗ ಮತ್ತು ಊರ್ಧ್ವಭಾಗವ್ಯಾಪಿಯಾಗಿ ಕುಂಡಲಿನೀಶಕ್ತಿ ಇದೆ. ಇದರ ಶಕ್ತಿ ಅಪಾರವಾಗಿದೆ. ಇದು ಎಂಟು ಬಗೆಯ ಪ್ರಕೃತಿಯ ಮಂತ್ರಿಸ್ಥಾನದಲ್ಲಿದ್ದು ಜೀವನಿಗೆ ವಿಕಾರ ಉಂಟುಮಾಡುತ್ತದೆ. ನಾಭಿಯಲ್ಲಿರುವ ಅಗ್ನಿಮಂಡಲದಲ್ಲಿರುವ ಬೆಂಕಿಯನ್ನು ಉದ್ದೀಪಿಸುತ್ತದೆ. ಮೂಲಾಧಾರದಿಂದ ಹೊರಟ ಉದಾನ ವಾಯುವಿನಿಂದ ನಾಭಿಮಂಡಲದ ಬೆಂಕಿ ಸಂಪರ್ಕ ಹೊಂದಿದಾಗ ಈ ಕುಂಡಲಿನೀ ಸುಟ್ಟು ಹೋಗುತ್ತದೆ. ಅನಂತರ ಜೀವನು ಸುಷುಮ್ನಾ ನಾಡಿಯ ಮೂಲಕ ಉದಾನನು ತೋರಿಸಿದ ಮಾರ್ಗದ ಮೂಲಕ ಉತ್ತಮಲೋಕಗಳನ್ನು ಸೇರುತ್ತಾನೆ.

ತಸ್ಯೋರ್ಧ್ವಂ ಕುಂಡಲಿಸ್ಥಾನಂ ನಾಭಿಸ್ತಿರ್ಯಗಧೋರ್ಧ್ವತಃ.
ಅಷ್ಟಪ್ರಕೃತಿರೂಪಾ ಯಾ ತಯಾಸೌ ಕುಂಡಲೀಕೃತಾ.

### ಹತ್ತು ಪ್ರಮುಖ ನಾಡಿಗಳು

೧. ಕಂದದ ಮಧ್ಯನಾಡಿ ಸುಷುಮ್ನಾ.

೨. ಅದರ ಎಡಭಾಗದಲ್ಲಿ ಎಡಮೂಗಿನವರೆಗೆ ವ್ಯಾಪಿಸಿದ ನಾಡಿ ಇಡಾ.

೩. ಸುಷುಮ್ನೆಯ ಬಲಭಾಗದಿಂದ ಹೊರಟ ಪಿಂಗಲಾ ನಾಡಿ ಬಲಮೂಗಿನವರೆಗೆ ವ್ಯಾಪಿಸಿದೆ.

೪. ಸುಷುಮ್ನಾನಾಡಿಯ ಮುಂಭಾಗದಲ್ಲಿ ಗಾಂಧಾರೀ ನಾಡಿ ಇದೆ.

೫. ಸುಷುಮ್ನಾನಾಡಿಯ ಹಿಂಭಾಗದಲ್ಲಿ ಹಸ್ತಿಜಿಹ್ವಾ ನಾಡಿ ಎಡಗಣ್ಣಿನವರೆಗೆ ವ್ಯಾಪಿಸಿದೆ.

೬. ಸುಷುಮ್ನಾ ಎಡಭಾಗದಲ್ಲಿರುವ ಪೂಷಾ ನಾಡೀ ಎಡಕಿವಿಯವರೆಗೆ ಲಂಬಿಸಿದೆ.

೭. ಸುಷುಮ್ನಾದ ಬಲಭಾಗದಲ್ಲಿರುವ ಯಶಸ್ವಿನೀ ನಾಡಿ ಬಲಕಿವಿಯವರೆಗೆ ವ್ಯಾಪಿಸಿದೆ.

೮. ಕಂದಸ್ಥಾನದ ಕೆಳಗಿನ ಗುದದ್ವಾರದವರೆಗೆ ಪಸರಿಸಿದ ನಾಡಿ ಆಲಂಬುಸಾ.

೯. ಕಂದಸ್ಥಾನದಿಂದ ಜನನೇಂದ್ರಿಯದವರೆಗೆ ಸಂಬಂಧಿಸಿದ ನಾಡಿ ಗುಹ್ಯ.

೧೦. ಪಾದಾಂಗುಷ್ಠದ ಸಂಪರ್ಕವಿರುವ ನಾಡಿ ಕೌಶಿನೀ.

ಹೀಗೆ ೧. ಸುಷುಮ್ನಾ ೨. ಇಡಾ ೩. ಪಿಂಗಲಾ ೪. ಗಾಂಧಾರಿ ೫. ಹಸ್ತಿಜಿಹ್ವಾ, ೬. ಪೂಷಾ ೭. ಯಶಸ್ವಿನಿ ೮. ಆಲಂಬುಸಾ ೯. ಗುಹ್ಯಾ ೧೦. ಕೌಶಿನೀ ಎಂಬುದಾಗಿ ಒಟ್ಟು ೧೦ ನಾಡಿಗಳು ಕಂದದಿಂದ ಪ್ರವಹಿಸುವುವು.

ಇವುಗಳಿಂದ ಜನಿಸುವ ಸ್ಥೂಲ, ಸೂಕ್ಷ್ಮನಾಡಿಗಳು ೭೨,೦೦೦ ಇವೆ. ಈ ಹತ್ತು ಪ್ರಧಾನನಾಡಿಗಳಲ್ಲಿ ಹತ್ತು ವಾಯುಗಳು ಸಂಚರಿಸುತ್ತವೆ. ಈ ನಾಡಿಗಳಲ್ಲಿ ೧. ಪ್ರಾಣ ೨. ಅಪಾನ ೩. ವ್ಯಾನ ೪. ಉದಾನ ೫. ಸಮಾನ ೬. ನಾಗ ೭.

ಕೂರ್ಮ ೮. ಕೃಕರ ೯. ದೇವದತ್ತ ೧೦. ಧನಂಜಯ. ಇವೇ ದೇಹದ ವಿಭಿನ್ನ ಕ್ರಿಯೆ ನಡೆಸುತ್ತವೆ.

೧. ಪ್ರಾಣವಾಯುವು ಮುಖ, ಮೂಗು, ಹೃದಯ, ನಾಭಿಮಂಡಲ-ಗಳೆಂಬ ನಾಲ್ಕು ಸ್ಥಾನಗಳಲ್ಲಿ ಜಾಗೃತವಾಗಿರುವುದು.

೨. ಅಪಾನವಾಯುವು ಕೊಳೆ ಹೊರಹಾಕುವ ಎರಡು ಇಂದ್ರಿ-ಯಗಳು, ತೊಡೆ, ಮೊಣಗಂಟು ಹೀಗೆ ನಾಲ್ಕು ಸ್ಥಳಗಳಲ್ಲಿ ಮನೆ ಮಾಡಿದೆ.

೩. ಸಮಾನವೂ ಎಲ್ಲ ಶರೀರದಲ್ಲಿಯೂ ಪ್ರವಹಿಸುವುದು.

೪. ಉದಾನವು ಎಲ್ಲ ಸಂಧಿಗಳಲ್ಲಿ ಸಂಚರಿಸುವುದು.

೫. ವ್ಯಾನವು ಕಾಲು, ಕಿವಿಗಳು, ಹೊಟ್ಟೆ, ಸೊಂಟ, ಭುಜ, ಕುತ್ತಿಗೆ ಮೊದಲಾದ ಸ್ಥಳದಲ್ಲಿ ಪ್ರವಹಿಸುವುದು.

೬. ನಾಗ ಎಂಬ ಪ್ರಾಣವು ಚರ್ಮದಲ್ಲಿ ಸನ್ನಿಹಿತವಾಗಿರುವುದು.

೭. ಕೂರ್ಮವು ಚರ್ಮವನ್ನು ಮನೆ ಮಾಡಿಕೊಂಡಿದೆ.

೮. ಕೃಕರ ವಾಯುವು ಮಾಂಸಾಶ್ರಿತವಾಗಿದೆ.

೯. ದೇವದತ್ತವು ರಕ್ತದಲ್ಲಿದೆ.

೧೦. ಧನಂಜಯವು ಮೇದಸ್ಸಿನಲ್ಲಿದೆ.

ಈ ಪ್ರಮೇಯವು ತತ್ತ್ವಕಣಿಕಾ ಗ್ರಂಥದಲ್ಲಿ ಸ್ಫುಟವಾಗಿದೆ -

೧. ತತ್ರ ಪ್ರಾಣಸ್ಯ ಆಸ್ಯ ನಾಸಿಕಯೋರ್ಮಧ್ಯೇ ನತಮಿವ ಸ್ಥಾನಂ ಹೃದಯಂ ನಾಭಿಮಂಡಲಂ ಪಾದಾಂಗುಷ್ಠಮಿತಿ ಸ್ಥಾನಚತುಷ್ಟ-ಯಮ್.

೨. ಅಪಾನಸ್ಯ ತು ಪಾಯುರುಪಸ್ಥಮುರುಜಾನುಶ್ಚೇತಿ ಚತುಷ್ಟಯಂ ಸ್ಥಾನಮ್.

೩. ಸಮಾನಸ್ಯ ಸರ್ವಾಣಿ ಗಾತ್ರಾಣಿ.

೪. ಉದಾನಸ್ಯ ಸರ್ವಾಃ ಸಂಧಯಃ.

೫. ವ್ಯಾನಸ್ಯ ಪಾದೌ, ಶ್ರೋತ್ರೇ, ಉದರಃ, ಕಟಿಃ, ಸ್ಕಂಧೌ, ಗಲಂ ಚೇತ್ಯೇತಾನಿ ಸ್ಥಾನಾನಿ.

೬. ನಾಗಸ್ಯ ತ್ವಕ್ ಸ್ಥಾನಮ್.

೭. ಕೂರ್ಮಸ್ಯ ಚರ್ಮ.

೮. ಕೃಕರಸ್ಯ ಮಾಂಸಮ್.

೯. ದೇವದತ್ತಸ್ಯ ರುಧಿರಮ್.

೧೦. ಧನಂಜಯಸ್ಯ ಮೇದಃ.

ಪ್ರಾಣಗಳ ಕಾರ್ಯಗಳು

೧. ಪ್ರಾಣವಾಯುವು ಆಹಾರಪದಾರ್ಥಗಳನ್ನು ಸಮೀಕರಿಸುವುದು.

೨. ಅಪಾನವಾಯುವು ಕೊಳೆ ಹೊರಹಾಕುವುದು.

೩. ವ್ಯಾನವಾಯುವು ಶ್ವಾಸವ್ಯಾಪಾರವನ್ನು ನಡೆಸುವುದು.

೪. ಉದಾನವಾಯುವು ಶರೀರದ ಸ್ವಾಸ್ಥ್ಯವನ್ನು ಕಾಪಾಡುವುದು.

೫. ಸಮಾನವಾಯುವು ಪುಷ್ಟಿಯನ್ನು ಕರುಣಿಸುವುದು.

೬. ನಾಗವಾಯುವಿನ ಅಸ್ತಿತ್ವದ ಫಲವೇ ಭಾರ ಎತ್ತುವಿಕೆ.

೭. ಕೂರ್ಮವಾಯು ಕಣ್ಮುಚ್ಚಲು ಕಾರಣವಾಗಿದೆ.

೮. ಕೃಕರವಾಯುವು ಹಸಿವು ನೀರಡಿಕೆಗಳನ್ನು ಉತ್ಪಾದಿಸುವುದು.

೯. ದೇವದತ್ತವಾಯುವು ನಿದ್ರೆಗೆ ಕಾರಣವಾಗಿದೆ.

೧೦. ಧನಂಜಯವು ಮೃತಶರೀರದ ಶೋಭೆಯನ್ನು ಉಳಿಸುವುದಾಗಿದೆ.

ಸುಷುಮ್ನಾ ನಾಡಿಯಲ್ಲಿ ಉಪಾಸನೆ

ಕಂದದ ಮಧ್ಯದಲ್ಲಿರುವುದೇ ಸುಷುಮ್ನಾ ನಾಡಿ. ಅದು ವಜ್ರಿಕಾ, ಆರ್ಯಾ, ಅವಭಾಸಿನೀ, ವೈದ್ಯುತಾ, ಬ್ರಹ್ಮನಾಡಿ ಎಂಬುದಾಗಿ ೫ ಬಗೆಯಾಗಿದೆ.

ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಿಕಾ ಆರ್ಯಾ ಅವಭಾಸಿನೀ.
ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚಪ್ರಭೇದಿನೀ.

**ಪೃಷ್ಠವಾಮಾಗ್ರದಕ್ಷಾಂತರ್ಭೇದಾಸ್ತೇ ತು ಕ್ರಮೇಣ ತು.**
**ಹರಿನ್ನೀಲಃ ಸಿತಃ ಪಿಂಗಃ ಲೋಹಿತಶ್ಚಾತ್ರ ಕೇಶವಃ.**
**ಪ್ರದ್ಯುಮ್ನಾದಿಸ್ವರೂಪೇಣ ಧ್ಯೇಯಃ ಸಿದ್ಧಿಮಭೀಪ್ಸತಾ. (ತಂ.ಸಂ 4.)**

ಸುಷುಮ್ನಾ ಹಿಂದೆ ವಜ್ರಿಕಾನಾಡಿ ಇದ್ದು ಅಲ್ಲಿ ಹಸಿರುಬಣ್ಣದ ಪ್ರದ್ಯುಮ್ನನಿರುವನು. ಸುಷುಮ್ನಾನಾಡಿಯ ಎಡಭಾಗದಲ್ಲಿ ಆರ್ಯಾನಾಡಿ ಇದ್ದು ಅದರಲ್ಲಿ ನೀಲವರ್ಣನಾದ ಅನಿರುದ್ಧನಿರುವನು. ಸುಷುಮ್ನಾನಾಡಿಯ ಮುಂಭಾಗದಲ್ಲಿ ಅವಭಾಸಿನೀನಾಡಿ ಇದ್ದು ಅಲ್ಲಿ ಬಿಳಿಯ ಬಣ್ಣದ ವಾಸುದೇವನಿರುವನು. ಸುಷುಮ್ನಾನಾಡಿಯ ಬಲಭಾಗದಲ್ಲಿ ವೈದ್ಯುತಾನಾಡಿ ಇದ್ದು ಪಿಂಗಲವರ್ಣದ ಸಂಕರ್ಷಣನಿರುವನು. ಸುಷುಮ್ನಾನಾಡಿಯ ಒಳಭಾಗದಲ್ಲಿ ಬ್ರಹ್ಮನಾಡಿ ಇದ್ದು ರಕ್ತವರ್ಣದ ನಾರಾಯಣನಿರುವನು. ಹೀಗೆ ಸುಷುಮ್ನಾ ಪ್ರಭೇದವಾದ ನಾಡಿಗಳಲ್ಲಿ ಭಗವಂತನ ಮಂಗಲಮಯರೂಪಗಳ ಉಪಾಸನೆ ನಡೆಸಬೇಕಿದೆ.

**ಆರು ಕಮಲಗಳು**

ತಂತ್ರ ಮತ್ತು ಆಗಮ ಗ್ರಂಥಗಳಲ್ಲಿ ಹೃದಯಕಮಲಗಳೆಂಬುದಾಗಿ ವರ್ಣನೆಯನ್ನು ಕಾಣುತ್ತೇವೆ. ವಾಸ್ತವವಾಗಿ ದೇಹವನ್ನು ಬಗೆದು ನೋಡಿದಾಗ ಅಲ್ಲಿ ಯಾವ ಕಮಲವೂ ಕಾಣಿಸುವುದಿಲ್ಲ. ಕಮಲದ ಉಪಮಾನವನ್ನು ಕೊಡುವ ಶಾಸ್ತ್ರದ ಹಿನ್ನೆಲೆ ಹೀಗಿದೆ - ನಾಲ್ಕು, ಆರು, ಎಂಟು, ಹನ್ನೆರಡು, ದಲಗಳಿಂದ ಕೂಡಿದ ಪುಷ್ಪದ ಅಥವಾ ಕಮಲದ ಅನುಭವವಿರುವವನಿಗೆ ಆಯಾ ಪಾರ್ಶ್ವಗಳ ಪರಿಕಲ್ಪನೆ ಇದ್ದು, ಅದರ ಹಿನ್ನೆಲೆಯಲ್ಲಿ ನಿರ್ದಿಷ್ಟ ಭಗವದ್ರೂಪಗಳ ಚಿಂತನೆಯ ಸೌಕರ್ಯಕ್ಕಾಗಿ ಹೀಗೆ ವರ್ಣಿಸಲಾಗಿದೆ. ಸ್ಥೂಲದೇಹದ ಹೊರಗಿರುವ ಈ ದೇಹದ ಭಾಗಗಳನ್ನೇ ಕಮಲವೆಂದು, ಜಲಾಶಯವೆಂದು ಶಾಸ್ತ್ರಗ್ರಂಥಗಳು ಆಲಂಕಾರಿಕವಾಗಿ ವರ್ಣಿಸಿವೆ.

ಭಗವತ್ಪಾದರು ತಂತ್ರಸಾರಸಂಗ್ರಹದಲ್ಲಿ ನಾಭಿಯ ಕೆಳಗೆ ಮೂಲಾಧಾರ, ಅಲ್ಲಿ ನಾಲ್ಕುದಳದ ರಕ್ತಪದ್ಮ ಮತ್ತು ಅದರೊಳಗೆ ತ್ರಿಕೋಣವಹ್ನಿಮಂಡಲವನ್ನು ಚಿಂತಿಸಿ ಅದರಲ್ಲಿ ಪ್ರದ್ಯುಮ್ನನ ಉಪಾಸನೆಯನ್ನು ನಿರೂಪಿಸಿದ್ದಾರೆ. ನಾಭಿಯಲ್ಲಿ ಆರು ದಲದ ಪದ್ಮವಿದ್ದು ಅದರೊಳಗೆ ಆರು ಕೋಣವುಳ್ಳ

ವಾಯುಮಂಡಲವನ್ನು ಚಿಂತಿಸಿ ಅಲ್ಲಿ ಅನಿರುದ್ಧರೂಪಿಯಾದ ಪರಮಾತ್ಮನ ಉಪಾಸನೆಯನ್ನು ಮಾಡಬೇಕು. ಹೃದಯದಲ್ಲಿ ಎಂಟು ದಲದ ಕೆಂಪುಪದ್ಮವಿದ್ದು, ಅಲ್ಲಿ ಹನ್ನೆರಡು ಕೋಣವುಳ್ಳ ಸೂರ್ಯಮಂಡಲ, ಮತ್ತೆ ಅಲ್ಲಿ ದುಂಡನೆಯಾದ ಚಂದ್ರಮಂಡಲ ಅದರೊಳಗೆ ಪುನಃ ವಹ್ನಿಮಂಡಲವನ್ನು ಚಿಂತಿಸಿ ಅದರೊಳಗಿರುವ ವಾಸುದೇವರೂಪಿಯಾದ ಪರಮಾತ್ಮನನ್ನು ಉಪಾಸಿಸಬೇಕು. ಕಂಠದಲ್ಲಿ ಎರಡು ದಲದ ಪದ್ಮವಿದ್ದು ಅಲ್ಲಿ ಚಂದ್ರಮಂಡಲವನ್ನು ಚಿಂತಿಸಿ ಅದರೊಳಗೆ ಸಂಕರ್ಷಣರೂಪಿಯಾದ ಪರಮಾತ್ಮನನ್ನು ಉಪಾಸಿಸಬೇಕು. ಹುಬ್ಬಿನ ನಡುವೆ ಎರಡು ದಲದ ಬಿಳಿಯ ಕಮಲವಿದ್ದು ಅಲ್ಲಿ ಚಂದ್ರಮಂಡಲವನ್ನು ಅನುಸಂಧಾನಮಾಡಿ ಅದರೊಳಗೆ ನಾರಾಯಣನನ್ನು ಧ್ಯಾನಿಸಬೇಕು. ಶಿರೋಭಾಗದಲ್ಲಿ ೧೨ ದಲದ ಬಿಳಿಯ ಪದ್ಮವಿದ್ದು ಅಲ್ಲಿ ಚಂದ್ರಮಂಡಲವನ್ನು ಚಿಂತಿಸಿ ಅದರೊಳಗೆ ವಾಸುದೇವರೂಪಿಯಾದ ಪರಮಾತ್ಮನನ್ನು ಉಪಾಸಿಸಬೇಕು. (ಷಟ್ಚಕ್ರಗಳ ವಿವರ ಚಿತ್ರವನ್ನು ಪರಿಶಿಷ್ಟ ೧, ಚಿತ್ರ ೧೦ರಲ್ಲಿ ನೋಡಿರಿ)

ಮೂಲೇ ಚ ನಾಭೌ ಹೃದಯೇಂದ್ರಯೋನಿಭ್ರೂರ್ಮಧ್ಯಮೂರ್ಧದ್ವಿಷಡಂತಕೇಷು.
ಚತುಃಷಡಷ್ಟ, ದ್ವಿ ಚತುರ್ದ್ವಿಷಟ್ಕದಲೇಷು ಪದ್ಮೇಷು ಸಿತಾರುಣೇಷು.
ಪಂಚಾತ್ಮಕೋಽಸೌ ಭಗವಾನ್ ಸದೈವ ಧ್ಯೇಯೋ ಹೃದಂತಾನ್ಯರುಣಾನಿ ತಾನಿ.
ತ್ರಿಕೋಣವಹ್ನೌ ಚ ಷಡಸ್ರವಾಯೌ ದ್ವಿಸ್ತ್ವಾವದತ್ರ ರವಿವೃತ್ತ ಶಶಿಸ್ಥವಹ್ನೌ.
ವೃತ್ತೇ ವಿಧಾವಪಿ ವಿಚಿನ್ತ್ಯಮಿದಂ ದಶಾರ್ಧರೂಪಂ ಸಿತಂ ತದಪಿತಂ ಹೃದಯಾತ್ಪರಸ್ಥಮ್.

| ತಂತ್ರಸಾರ-ಸಂಗ್ರಹದಲ್ಲಿ ಹೇಳಿದಂತೆ ನಾಡಿಗಳು | ಪದ್ಮದಲ | ಸ್ಥಲ | ಪರಮಾತ್ಮ ರೂಪ | ಯೋಗಸೂತ್ರ-ದಲ್ಲಿನ ನಾಮಗಳು | ಸ್ಥೂಲ ದೇಹನಾಮ |
| --- | --- | --- | --- | --- | --- |
| | | | | ಮೂಲಾಧಾರ-ಪದ್ಮ - ಕುಂಡಲಿನೀ | Kidneys<br>Spinal column |
| ಮೂಲಾಧಾರ<br>Etheric Cakras | ೪ ದಲ<br>ರಕ್ತಪದ್ಮ | ತ್ರಿಕೋಣ<br>ವಹ್ನಿಮಂಡಲ | ಪ್ರದ್ಯುಮ್ನ | ಸ್ವಾಧಿಷ್ಠಾನಚಕ್ರ | Sex organs |
| ನಾಭಿ<br>Solar Plexus | ೬ ದಲ<br>ರಕ್ತಪದ್ಮ | ಷಟ್ಕೋಣ<br>ವಾಯುಮಂಡಲ | ಅನಿರುದ್ಧ | ಮಣಿಪೂರ | Stomach, Liver,<br>Gallbladder,<br>Nervous System |
| ಹೃದಯ<br>Heart | ೮ ದಲ<br>ರಕ್ತಪದ್ಮ | ದ್ವಾದಶಕೋಣ<br>ಸೂರ್ಯಮಂಡಲ | ವಾಸುದೇವ | ಅನಾಹತ | Heart circulatory<br>System |
| ಇಂದ್ರಯೋನಿ<br>Throat | ೨ ದಲ<br>ಶುಕ್ಲಪದ್ಮ | ವೃತ್ತೇ ವಿಧೌ | ಸಂಕರ್ಷಣ | ವಿಶುದ್ಧ | Breathing apparatus<br>Alimentary Canal |
| ಭ್ರೂಮಧ್ಯ<br>Brow | ೪ ದಲ<br>ಶುಕ್ಲಪದ್ಮ | ವೃತ್ತೇ ವಿಧೌ | ನಾರಾಯಣ | ಆಜ್ಞಾ | Lower brain,<br>Left eye, Nose,<br>Nervous system |
| ಮೂರ್ಧ<br>Crown | ೧೨ ದಲ<br>ಶುಕ್ಲಪದ್ಮ | ವೃತ್ತೇ ವಿಧೌ | ವಾಸುದೇವ | ಸಹಸ್ರಾರ | Uppar brain,<br>Right eye |

ಶ್ರೀಮದ್ಭಾಗವತವು ದ್ವಿತೀಯಸ್ಕಂಧದಲ್ಲಿ ಜ್ಞಾನಿಯ ಅಂತಿಮಶರೀರದ ಉತ್ಕ್ರಮಣದ ಸಮಯದಲ್ಲಿ ಷಟ್‌ಚಕ್ರಗಳಲ್ಲಿ ನಡೆಯುವ ವಾಯುಗತಿಯನ್ನು ಮತ್ತು ಜ್ಞಾನಿಯ ಉಪಾಸನಾಪದ್ಧತಿಯನ್ನು ನಿರೂಪಿಸಿದೆ. ಭಗವತ್ಪಾದರು ಹೇಳಿದ ಈ ಪ್ರಮೇಯ ಭಾಗವತ ಹಾಗೂ ವೈಷ್ಣವತಂತ್ರಗಳ ಸಾರಸಂಗ್ರಹ-ರೂಪವಾಗಿದೆ.

## ಗ್ರಂಥದ ಉಪಸಂಹಾರ

ಗುಣಪೂರ್ಣನಾದ ಹರಿಯು ಸೃಷ್ಟಿಯ ಮೊದಲು ನಾಲ್ಮೊಗನ ಪ್ರಾರ್ಥ-ನೆಯ ಮೇರೆಗೆ ಉಪದೇಶಿಸಿದ ಈ ತಂತ್ರಸಾರ ಪರಮ ಮಾಂಗಲಿಕವಾಗಿದೆ. ಶ್ರೀಮಧ್ವಭಗವತ್ಪಾದರು ಸುಜರಿಗೆ ಕೇವಲ ಕರುಣೆಯಿಂದ ಅದರ ಸಾರವನ್ನು ಸಂಗ್ರಹಿಸಿ ನೀಡಿದರು. ಇದರ ಪಾರಾಯಣವೂ ಸಕಲಪಾಪನಿವಾರಕವಾಗಿದೆ. ಎಲ್ಲ ಅಭೀಷ್ಟಗಳನ್ನು ಪೂರೈಸುತ್ತದೆ. ಇಲ್ಲಿ ನಿರೂಪಿಸಿದ ಪ್ರಮೇಯಗಳನ್ನು ತಿಳಿದಲ್ಲಿ ಅಥವಾ ಅನುಷ್ಠಾನ ಮಾಡಿದಲ್ಲಿ ಅಥವಾ ತಿಳಿವು ಅನುಷ್ಠಾನ-ಗಳೆರಡನ್ನೂ ಮೈಗೂಡಿಸಿಕೊಂಡಲ್ಲಿ ಅದರ ಮಹತ್ವವನ್ನು ಮತ್ತೇನು ಬಣ್ಣಿಸಲು ಸಾಧ್ಯ.

**ಗ್ರಂಥೋಽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ.**
**ಕಿಮು ಜ್ಞಾನಾತ್ ಅನುಷ್ಠಾನಾತ್ ಉಭಯಸ್ಮಾತ್ ಪುನಃ ಕಿಮು.**

ಇಂತಹ ಪರಮಪಾವನವಾದ ಗ್ರಂಥದಲ್ಲಿ ಅಪೂರ್ವಮಂತ್ರಗಳ ಓಂಕಾರದ ವಿಷಯವ್ಯಾಪ್ತಿಯ ವೈಭವದ ನಿರೂಪಣೆ, ದೇವಪೂಜಾವಿಧಿ, ಹೋಮ-ಕುಂಡದ ನಿರ್ಮಾಣ, ದೇವಸ್ಥಾನದ ವಾಸ್ತು, ದೇವಸ್ಥಾನನಿರ್ಮಾಣ, ಪ್ರತಿಮಾ-ನಿರ್ಮಾಣ, ಪ್ರತಿಷ್ಠಾವಿಧಿ, ಜೀರ್ಣೋದ್ಧಾರವಿಧಿ, ತಿಳಿಯಬೇಕಾದ ಅಪೂರ್ವ ಪ್ರಮೇಯಗಳ ವಿವರಣೆ, ಮೊದಲಾದ ಹತ್ತು ಹಲವು ಬಗೆಯ ತಿಳಿವಿನ ಸೆಲೆ ಇದೆ. ಅಧ್ಯಯನ ಪ್ರಿಯರಿಗೆ ಇದೊಂದು ಆದರದಿಂದ ಜೋಪಾಸನೆ ಮಾಡುವ ಹೃದಯದಲ್ಲಿ ಚಿಂತನೆಯನ್ನು ಜಾಗೃತಗೊಳಿಸಿಕೊಳ್ಳುವ ಅನನ್ಯಕೃತಿಯಾಗಿದೆ.

ನಾವು ತಿಳಿದ ತತ್ತ್ವಗಳನ್ನು ಅನುಸಂಧಾನದಲ್ಲಿ ತರಲು ತಂತ್ರಗ್ರಂಥಗಳ ಅಧ್ಯಯನದ ಆವಶ್ಯಕತೆ ಅನಿವಾರ್ಯವಿದೆ. ಇಂದು ಶೈವ-ಶಾಕ್ತ-ವಾಮಾ-

ಚಾರದ ನೂರಾರು ತಂತ್ರಗ್ರಂಥಗಳು ಉಪಲಬ್ಧವಿವೆ. ಆದರೆ ದಾರಿ ತಪ್ಪಿಸುವ ಈ ತಂತ್ರಗ್ರಂಥಗಳ ಜಾಡು ತೊರೆದು, ಪರಿಶುದ್ಧ ಚಿಂತನೆ ಹಾಗೂ ಅನು-ಸಂಧಾನಪದ್ಧತಿಯನ್ನು ಪರಿಚಯಿಸುವ ಕಾರ್ಯವನ್ನು ಈ ತಂತ್ರಸಾರಸಂಗ್ರಹವು ನೆರವೇರಿಸಿಕೊಟ್ಟಿದೆ. ಇದು ಸೃಷ್ಟಿಯ ಆದಿಯಲ್ಲಿ ಪದ್ಮನಾಭನು ತನ್ನ ಮುದ್ದಿನ ಮಡದಿಯೂ, ಅನಾದಿಕಾಲದ ಗೆಳತಿಯೂ ಆದ ರಮೆ ಹಾಗೂ ಚತುರಾನನರಿಗೆ ಉಪದೇಶಿಸಿದ ಪಾವನಗ್ರಂಥವಾಗಿದೆ. ಪಾಂಚರಾತ್ರಗ್ರಂಥಗಳು ನಿರೂಪಿಸುವ ಪೂಜಾಪದ್ಧತಿ, ಅನುಸಂಧಾನಪದ್ಧತಿ ಪ್ರತಿಯೊಂದು ವಸ್ತುಗಳಲ್ಲಿ ಗುರುತಿಸಬೇಕಾದ ಭಗವದ್ರೂಪಗಳು ದೇಗುಲ ನಿರ್ಮಾಣ, ಗೃಹವಾಸ್ತು, ದೇವಸ್ಥಾನವಾಸ್ತು, ಉದ್ಯಾನನಿರ್ಮಾಣ, ವಾಪಿ-ಕೂಪ-ತಟಾಕನಿರ್ಮಾಣ, ಈ ಎಲ್ಲ ವಿಷಯಗಳ ಸಂಕ್ಷಿಪ್ತ ಹಾಗೂ ಸುಂದರ ನಿರೂಪಣೆಯನ್ನು ಈ ಕೃತಿಯಲ್ಲಿ ಗಮನಿಸಬಹುದಾಗಿದೆ. **ಸಂಕ್ಷೇಪವಿಸ್ತರಾಭ್ಯಾಂ ಹಿ ಪ್ರವದಂತಿ ಮನೀಷಿಣಃ** ಎಂಬ ಆರ್ಷವಾಣಿಯಂತೆ ಸಂಕ್ಷೇಪವಾಗಿ ಈ ಅಂಶಗಳನ್ನು ಪರಿಚಯಿಸಿ-ಕೊಂಡವರು ಉಪಲಬ್ಧ ಪಾಂಚರಾತ್ರಾಗಮಗಳ ವಿವಿಧ ಕೃತಿಗಳಲ್ಲಿ ಇದರ ವಿರಾಡ್ರೂಪವನ್ನು ಕಾಣಬಹುದಾಗಿದೆ.

ತತ್ತ್ವಶಾಸ್ತ್ರದ ತಿಳುವಳಿಕೆ ನಮ್ಮನ್ನು ಸ್ವೇಚ್ಛಾಚಾರದೆಡೆಗೆ ಭೋಗಪ್ರಧಾನ ಬದುಕಿನೆಡೆಗೆ ಕೊಂಡೊಯ್ದಲ್ಲಿ ಅಂತಿಮವಾಗಿ ಅಶಾಂತಿ ದುಃಖಗಳಲ್ಲಿ ಪರ್ಯವಸಾನಗೊಳ್ಳುವ ಮೂಲಕ ವಿನಾಶದಲ್ಲಿ ಪರ್ಯವಸಾನಗೊಳ್ಳುವುದು. ತತ್ತ್ವಶಾಸ್ತ್ರದ ಅಧ್ಯಯನದ ಫಲಶ್ರುತಿ-ನಮ್ಮಲ್ಲಿ ಶಾಂತಿ, ಸಂಯಮ, ಪ್ರಾಮಾಣಿಕತೆ, ಅಧ್ಯಯನಶೀಲತೆ, ಅನುಸಂಧಾನಪದ್ಧತಿ, ಸುಜನಮಾರ್ಗ-ದರ್ಶನಗಳಲ್ಲಿ ಪರ್ಯವಸಾನಗೊಳ್ಳಬೇಕು. ಇಂತಹ ತಂತ್ರಗ್ರಂಥಗಳ ಅಧ್ಯಯನ ಈ ದೃಷ್ಟಿಯಿಂದ ಎಲ್ಲ ಕಾಲದ ಜನತೆಗೂ ವರದಾನವಾಗಬಲ್ಲದು. ಆತ್ಮಪ್ರಜ್ಞೆ, ಅಹಂಕಾರಪ್ರಜ್ಞೆಯನ್ನು ಹೊಡೆದೋಡಿಸಿ ಪರಮಾತ್ಮಪ್ರಜ್ಞೆಯನ್ನು ಬಿತ್ತಿ ಬೆಳಗಿಸುವ ಇಂತಹ ಕೃತಿಗಳ ಅಧ್ಯಯನ ಎಂದೆಂದಿಗೂ ಸುಜನರ ಬಾಳ ಬೆಳಕಾಗಿ ನಿಲ್ಲಬಲ್ಲದು. ಈ ಕೃತಿಯ ಸಂಶೋಧನೆಯಲ್ಲಿ ಮಾಡಬೇಕಾದುದು ಅನಂತ. ನೀಡಿದ್ದು ಪರಮಾಣು ಮಾತ್ರ.

# ಕೃತಜ್ಞತಾ ಸಮರ್ಪಣೆ

ನನಗೆ ಶಾಸ್ತ್ರಪಾಠ ಹೇಳಿ ಪರಮಾನುಗ್ರಹ ಮಾಡಿದ ವಿದ್ಯಾ ಗುರುಗಳಾದ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರಿಗೆ ನನ್ನ ಅನಂತ ನಮನ-ಗಳು. ಎಲ್ಲ ಕಾಲದ ಸಮಾಜಕ್ಕೆ ಉಪಯೋಗಿಯಾದ ಸಂಸ್ಕೃತಸಾಹಿತ್ಯದಲ್ಲಿರುವ ಕೃತಿಗಳನ್ನು ಪ್ರಕಟಗೊಳಿಸಬೇಕೆಂಬ ಉದಾತ್ತ ಚಿಂತನೆಯನ್ನು ಕಾರ್ಯರೂಪಕ್ಕೆ ತರಬಯಸಿದ ಖ್ಯಾತಿವೆತ್ತ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ಸ.ನ.ಹೆಗಡೆಯವರ ಪ್ರೋತ್ಸಾಹ ಇಲ್ಲಿ ಅವಿಸ್ಮರಣೀಯವಾಗಿದೆ. ಅವರಿಗೆ ನನ್ನ ಆದರದ ನಮನಗಳು.

ಆದರಣೀಯ ನಿರ್ದೇಶಕರೂ, ಶ್ರೇಷ್ಠವಿದ್ವಾಂಸರೂ ಆದ ಡಾ. ಕೆ.ವಿ.ರಮೇಶ್ ಅವರ ಪ್ರೋತ್ಸಾಹದ ನಲ್ನುಡಿಯ ಮೂರ್ತರೂಪವೇ ಈ ಗ್ರಂಥ ಸಂಪಾದನೆಯಾಗಿ ಓದುಗರ ಕೈ ಸೇರಿದೆ. ಅವರ ಮಾರ್ಗದರ್ಶನದಲ್ಲಿ ಕಾರ್ಯವನ್ನು ನಡೆಸುವುದು ಬಹುದೊಡ್ಡ ಭಾಗ್ಯವೆಂದು ನನ್ನ ನಂಬಿಕೆ. ಅವರಿಗೆ ನನ್ನ ಆದರಪೂರ್ವಕ ವಂದನೆಗಳು.

ಸಂಸ್ಕೃತವನ್ನು ಸಹಜವಾಗಿ ಅರ್ಥಮಾಡಿಕೊಳ್ಳಬಲ್ಲವರಿಗೆ ಉಪೋದ್ಘಾತದ ಅಗತ್ಯವಿಲ್ಲದ ಕಾರಣ ಸಂಸ್ಕೃತದಲ್ಲಿ ಉಪೋದ್ಘಾತವನ್ನು ವಿಸ್ತರಿಸದೆ ಕನ್ನಡ ಭಾಷೆ-ಯಲ್ಲಿ ಕೃತಿಯ ಸಾರವನ್ನು ಸೆರೆ ಹಿಡಿಯುವ ಪ್ರಯತ್ನ ಮಾಡಲಾಗಿದೆ. ಹಿರಿಯ ವಿದ್ವಾಂಸರಾದ ಹೆಚ್.ವಿ.ನಾಗರಾಜರಾಯರು ಆಂಗ್ಲಭಾಷೆಯಲ್ಲಿ ಇದರ ಸಾರವನ್ನು ಸಿದ್ಧಪಡಿಸಿದ್ದಾರೆ. ಇವೆರಡೂ ಓದುಗರಿಗೆ ಸಹಾಯಕವಾಗುವುದೆಂದು ನಂಬಿರುವೆ. ಈ ತಂತ್ರಸಾರಸಂಗ್ರಹದ ಸಂಪಾದನೆ ಮುಗಿಯುತ್ತಿದ್ದಂತೆ ತಂತ್ರಸಾರಸಂಗ್ರಹದ ಅಪ್ರಕಟಿತ ಅಪೂರ್ವವಾದ ಶ್ರೀನಿವಾಸಾಚಾರ್ಯರ ವ್ಯಾಖ್ಯೆ ದೊರೆಯಿತು. ಈ ಶ್ರೀನಿವಾಸಾಚಾರ್ಯರು ತಾಮ್ರಪರ್ಣಿವಂಶದ ಮೂಲಪುರುಷರೆಂದು ಅನ್ನಿಸುತ್ತದೆ. ಹೆಚ್ಚಿನ ಆಧಾರಗಳು ದೊರೆಯುವ ತನಕ ಸ್ಫುಟವಾಗಿ ನಿರ್ಧಾರತಳೆಯಲು ಸಾಧ್ಯವಾಗುತ್ತಿಲ್ಲ. ಹಾಗೆಯೆ ಸನತ್ಕುಮಾರವಾಸ್ತುಶಾಸ್ತ್ರ ಹಸ್ತಪ್ರತಿ ದೊರಕಿತು. ಈ

ಎರಡನ್ನು ಒಂದು ವಾರದಲ್ಲಿ ಶೋಧಿಸಿ ವಿದ್ವಾಂಸರಿಗೆ ಅರ್ಪಿಸುತ್ತಿರುವೆ. ಶ್ರೀನಿವಾಸಾಚಾರ್ಯರ ಗೂಢಾರ್ಥಸಂಗ್ರಹದ ಶೋಧನೆಯಲ್ಲಿ ನನಗೆ ತುಂಬಾ ಶ್ರದ್ಧೆ ಹಾಗೂ ವಿದ್ಯೆಯಿಂದ ನೆರವು ನೀಡಿದ ನನ್ನ ಸಹೋದರ ವಿದ್ವಾಂಸರಾದ ರಘೂತ್ತಮಾಚಾರ್ಯ ನಾಗಸಂಪಿಗೆಯವರ ಸಹಕಾರವನ್ನು ಸ್ಮರಿಸದಿರಲಾರೆ. ಅವರಿಗೆ ಭಗವಂತನ ಅನುಗ್ರಹವನ್ನು ಕೋರುವೆ. ಹಂಸಕ್ಷೀರನ್ಯಾಯದಿಂದ ಈ ಪ್ರಯತ್ನವನ್ನು ಸ್ವಾಗತಿಸಬೇಕಾಗಿ ಪ್ರಾರ್ಥನೆ. ಇದರೊಡನೆ ಪರಿಶಿಷ್ಟರೂಪವಾಗಿ ಗೃಹವಾಸ್ತುವಿನ ಸಂಕ್ಷಿಪ್ತವಿವರಣೆ ನೀಡಿದ್ದು, ಅದು ಎಲ್ಲ ವರ್ಗದ ಜನತೆಗೂ ಅತ್ಯಂತ ಉಪಯುಕ್ತ-ವೆಂಬುವುದರ ಬಗ್ಗೆ ಸಂಶಯವಿಲ್ಲ. ಮೂಲಕೃತಿಯ ಸಾರಸಂಗ್ರಹದಲ್ಲಿ ಉಪಯುಕ್ತ-ವಾದ ವ್ಯಾಖ್ಯಾನದ ಅಂಶಗಳನ್ನು ಸೇರಿಸಿರುವೆ. ನಿರ್ದಿಷ್ಟ ವಿಷಯಗಳ ಸ್ಪಷ್ಟಚಿತ್ರಣ-ಕ್ಕಾಗಿ ಕೆಲವು ಚಿತ್ರಗಳನ್ನು ನೀಡಲಾಗಿದ್ದು ಅವು ಓದುಗರಿಗೆ ಉಪಯೋಗಿಯಾಗ-ಬಹುದೆಂದು ನಂಬಿದ್ದೇನೆ. ಚಿತ್ರಗಳನ್ನು ಬರೆಯುವಲ್ಲಿ ನೆರವು ನೀಡಿದ ಚಿ.ದಿನಕರ ಅಡಿಗ ಹಾಗೂ ಶ್ರೇಷ್ಠ ಪ್ರತಿಭಾವಂತರಾದ ಕೆ.ಎಂ.ಶೇಷಗಿರಿ ಇವರಿಬ್ಬರಿಗೆ ನಾನು ಋಣಿಯಾಗಿದ್ದೇನೆ.

ಈ ಕೃತಿಯನ್ನು ಹೊರತರುವಲ್ಲಿ ಮೇಲೆ ತಿಳಿಸಿದಂತೆ ವಿಶ್ವವಿದ್ಯಾನಿಲಯದ ಕುಲಪತಿಗಳ ಹಾಗೂ ನಮ್ಮ ಸಂಶೋಧನಾಲಯದ ನಿರ್ದೇಶಕರ ಪ್ರೋತ್ಸಾಹ-ವನ್ನು ಸ್ಮರಿಸುತ್ತಾ ಅವರಿಗೆ ಆದರಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ. ಈ ಕಾರ್ಯದಲ್ಲಿ ವಿಶೇಷವಾದ ಅಭಿಮಾನವನ್ನು ತೋರಿದ ಉಪನಿರ್ದೇಶಕರಾದ ಡಾ. ಸಿ.ಎನ್. ಬಸವರಾಜ್ ಇವರಿಗೆ, ಡಿ.ಟಿ.ಪಿ. ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಿದ ವಿದುಷಿ ಗೌರಿ ಅವರಿಗೆ ಹಾಗೂ ಮುಖಪುಟವನ್ನು ಸಿದ್ಧಪಡಿಸಿ ನೀಡಿದ ವಿದ್ವಾನ್ ಗಿರಿಧರ ಇವರಿಗೆ ನನ್ನ ವಂದನೆಗಳು.

ತಮ್ಮ ವಿಶ್ವಾಸಿ,

ಡಾ. ಎ. ವಿ. ನಾಗಸಂಪಿಗೆ
ನಿವೃತ್ತ ಸಂಶೋಧಕರು
ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

## GIST OF THE TANTRASĀRASAṄGRAHA

**H.V. Nagaraja Rao**

The *Tantrasārasaṅgraha* is a summary of the teachings of *Śrī* Hari given to Brahma as per the latter's request. Jagadguru *Śrī Madhvācārya* has condenced the essence of *Tantrasāra* and bestowed it on aspirants of the Brahma *vidyā*.

The works which give an introduction to the tenets of philosophy and the real form of the rituals taught by the vedas are called Tantras. The contents of the Tantras include the form of mantras, their utilization, the image to be contemplated upon, the purpose of doing the japa of the mantras, the explanation of the fire, the eight limbs of the yoga, making of the images of Gods, building of temples and explanatations of the procedures of sacrifices. In this work of *Śrī Madhva*, we find the description of the various branches of knowledge as *Yaśōdā* found the whole universe in the mouth of *Śrī Kṛṣṇa.* Like a light house, this work helps the voyager in the ocean of philosophical achievement. Eventhough the work is small in volume it has an all - pervading scope and reminds the reader of the Trivikrama episode of Lord *Vāmana.*

The whole sound that emerged from the mouth of *Śrī* Hari at the beginning of creation was the sacred OM. The *Garuḍapurāṇa* describes the greatness of OM as follows -

"When *viśva* had the desire for the creation, two sounds emerged and they were OM and Atha in that order".

The sound OM is like the mother of all vedic literature. The meaning of OM is very comprehensive and therefore like the *Mahābhārata* it deserves to be considered as the storehouse of all knowledge.

Roughly speaking, there are three phonemes in OM viz., a, u, m. *Śrī Madhva* was the first and only mystic who declared that infinite sounds are letters in the OM. We can visualize a, u, m, *nāda*, bindu, *kalā*, *śānta* and *atiśānta* in Om. Origin of the *kalā* may be seen in the statement of *Śrī Nārāyaṇapaṇḍita* which says -

***ananta mātrāntamudāharanti yam***
***trimātra pūrvaṃ praṇavōccayaṃ budhāḥ.***

These eight represent *viśva, taijasa, prājña, turīya, ātma, antarātma, paramātma* and *jñānātma* or as *Śrī Mādhva* himself has described in the *Praṇavakalpa*, the eight forms viz., *Kṛṣṇa, Rāma, Narasiṃha, Varāha, Viṣṇu, Parañjyōti, Parambrahma* and *Vāsudēva* are manifested in OM which is also called *Praṇava*. From the 8-letters of the *praṇava* emerge all the 50-letters of the Sanskrit alphabet and 50 forms of the Lord which control or govern the said 50-letters. It may be explained as follows -

**1. *a***

| | | |
|---|---|---|
| ***a-ajaḥ*** | ***ā-ānandaḥ*** | ***i-indraḥ*** |

*ī-īśaḥ* *u-ugraḥ* *ū-ūrjaḥ*
*ṛ-ṛtambharaḥ* *ṝ-ṝghaḥ* *lṛ-lṛśaḥ*
*lṝ-lṝjiḥ* *ē-ēkātmā* *ai-airaḥ*
*ō-ōjabhṛt* *au-aurasaḥ* *aṃ-antaḥ*
*aḥ-ardhagarbhaḥ*

**2. *u***

*ka-kapilaḥ* *kha-khapatiḥ*
*ga-garuḍāsanaḥ* *gha-gharmaḥ*
*ṅa-ṅasāraḥ*

**3. *ma***

*ca-cārvāṅgaḥ* *cha-chandōgamyaḥ*
*ja-janārdanaḥ* *jha-jhāṭitāriḥ*
*ña-ñamaḥ*

**4. *nāda***

*ṭa-ṭaṅkī* *ṭha-ṭhalakaḥ*
*ḍa-ḍarakaḥ* *ḍha-ḍharī*
*ṇa-ṇātmā*

**5. *bindu***

*ta-tāraḥ* *tha-thabhaḥ*
*da-daṇḍī* *dha-dhanvī*
*na-namyaḥ*

**6. *kalā***

*pa-paraḥ* *pha-phalī*
*ba-balī* *bha-bhāgaḥ*
*ma-manuḥ*

**7. *śānta***

*ya-yajñaḥ* *ra-rāmaḥ*

*la-lakṣmīpatiḥ* *va-varaḥ*

**8. *atiśānta***

*śa-śāntasaṃvit* *ṣa-ṣaḍguṇaḥ*

*sa-sārātmā* *ha-haṃsaḥ*

*ḷa-ḷāḷukaḥ*

The colours of these 50 sacred forms of the Lord describe him in various ways. We have given only one meaning of each of these names for contemplation by the aspirants.

***I. akāra***

1. *ajaḥ* - Who is never born
2. *ānandaḥ* - Who is full of bliss
3. *indraḥ* - The supreme master
4. *īśaḥ* - Competent
5. *ugraḥ* - One who is terrific to the evil
6. *ūrjaḥ* - Controller of everything
7. *ṛtambharaḥ* - The source of all knowledge
8. *ṝghaḥ* - Destroyer of the evil
9. *ḷṛśaḥ* - Full of happiness
10. *ḹjiḥ* - Who is sub-ordinate to the devotees
11. *ēkātmā* - The great ruler
12. *airaḥ* - The controller of the chief life breath

13. *ōjabhṛt* - The strongest
14. *aurasaḥ* - Denizen in the heart
15. *antaḥ* - Annihilator
15. *ardhagarbhaḥ* - Resort for the life

***II. ukāra***

17. *kapilaḥ* - Who is a form of bliss
18. *khapatiḥ* - Controller of all senses
19. *garuḍāsanaḥ* - Having *Garuḍa* as his vehicle
20. *gharmaḥ* - One who is known through *śāstra*
21. *ṅasāraḥ* - Receipient of the essence

***III. makāra***

22. *cārvaṅgaḥ* - Handsome
23. *chandōgamyaḥ*- One who is known by the Veda
24. *janārdanaḥ* - Destroyer of the cycle of birth and death
25. *jhāṭitāriḥ* - Killer of enemies
26. *ñamaḥ* - Connoisseur of the *Sāma* hymns

***IV. nāda***

27. *ṭaṅkī* - Bearer of a weapon like a chisel
28. *ṭhalakaḥ* - One who grants bliss to Rudra & Indra
29. *ḍarakaḥ* - The source of light to the moon and the fire
30. *ḍharī* - One who is served by Brahma
31. *ṇātmā* - One who has the form of strength and science

### V. bindu

32. *tāraḥ* - One who helps in escaping from grief
33. *thabhaḥ* - Giver of knowledge residing in the heart
34. *daṇḍī* - One who holds a club
35. *dhanvī* - One who holds a bow
36. *namyaḥ* - One who is saluted by all

### VI. kalā

37. *paraḥ* - One who is different from all others
38. *phalī* - Giver of the results of all actions
39. *balī* - Strong
40. *bhāgaḥ* - One who is full of 6 types of wealth
41. *manuḥ* - Knowledge

### VII. śānta

42. *yajñaḥ* - Adored by everyone
43. *rāmaḥ* - Treasure of limitless bliss
44. *lakṣmīpatiḥ* - The Lord of Goddess Lakshmi
45. *varaḥ* - Worshipped by all

### VIII. atiśānta

46. *śāntasaṃvit* - Full of bliss and knowledge
47. *ṣaḍguṇaḥ* - Filled with 6 excellences
48. *sārātmā* - Knowledge and bliss

49. *haṃsaḥ* - Free from all flaws

50. *ḷāḷukaḥ* - Giver of the bliss to the liberated souls

1. These 50-letters manifested from OM are the locus of the 50 forms of the Lord and describe his greatness very attractively.

2. From the 8-letters in the *OMkāra aṣṭākṣarī* mantra which reads '*OM namō nārāyaṇāya*' is also manifested. The gods Vishva etc. are applicable to this mantra too.

3. From the a, u, m content in the *OMkāra* and its *nādavyāhṛti* viz., *bhūḥ bhuvaḥ svaḥ bhūrbhuvasvaḥ* are manifested. Aniruddha, Pradyumna, *Saṅkarṣaṇa* and *Vāsudēva* are the gods of these *vyāhṛtis*.

4. The elaborations of the 8-letters of one and the 4 *vyāhṛtis* is the 12-lettered *Vāsudēva* mantra. The 12 forms like *Kēśava* etc. are the Gods of this 12-lettered mantra.

5. When we multiply the 8-lettered *Nārāyaṇa* mantra by 3, the *Gāyatrī* which has 24-letters and which is also called the '*vēdamātā*' is the manifestation at the 5th level of the OM. The 24 forms of Lord Vishnu are the Gods which are represented by the 24-letters of *Gāyatrī*.

6. The *Gāyatrī* which has 3 feet and which is the evolution of OM gives manifestation to the *Puruṣasūkta* which contains three divisions.

7. The next evolution of the *Puruṣasūkta* which has three divisions is the *Trayī* or the three vedas. It is not necessary to state again that the whole literature is either *prakṛti* or *vikṛti* of the vedas. Thus the whole world of speech is nothing but the evolution of OM and it is a commentary on the *OMkāra* which eulozises the greatness and power of Lord Hari. All this is a bird's eye view of the OM.

## THE 24 DIVINE FORMS VIZ., KESHAVA ETC.

*Śrī Madhvācārya* has very accurately depicted the 24 divine forms of Lord Vishṇu with authoritive quotations -

| | | |
|---|---|---|
| *1. kēśava* | - | *śaṅkhacakragadāpadma* |
| *2. nārāyaṇa* | - | *padmagadācakraśaṅkha* |
| *3. mādhva* | - | *cakraśaṅkhapadmagadā* |
| *4. gōvinda* | - | *gadāpadmaśaṅkhacakra* |
| *5. viṣṇu* | - | *padmaśaṅkhacakragadā* |
| *6. madhusūdana* | - | *śaṅkhapadmagadācakra* |
| *7. trivikrama* | - | *gadācakraśaṅkhapadma* |
| *8. vāmana* | - | *cakragadāpadmaśaṅkha* |
| *9. śrīdhara* | - | *cakragadāśaṅkhapadma* |
| *10. hṛṣīkēśa* | - | *cakrapadmaśaṅkhagadā* |
| *11. padmanābha* | - | *padmacakragadāśaṅkha* |
| *12. dāmōdara* | - | *śaṅkhagadācakrapadma* |
| *13. saṅkarṣaṇa* | - | *śaṅkhapadmacakragadā* |
| *14. vāsudēva* | - | *śaṅkhacakrapadmagadā* |

| | | |
|---|---|---|
| *15. pradyumna* | - | *śaṅkhagadāpadmacakra* |
| *16. aniruddha* | - | *gadāśaṅkhapadmacakra* |
| *17. puruṣōttama* | - | *padmaśaṅkhagadācakra* |
| *18. adhōkṣaja* | - | *gadāśaṅkhacakrapadma* |
| *19. narasiṃha* | - | *padmagadāśaṅkhacakra* |
| *20. acyuta* | - | *padmacakraśaṅkhagadā* |
| *21. janārdana* | - | *cakraśaṅkhagadāpadma* |
| *22. upēndra* | - | *gadācakrapadmaśaṅkha* |
| *23. hari* | - | *cakrapadmagadāśaṅkha* |
| *24. kṛṣṇa* | - | *gadāpadmacakraśaṅkha* |

(*śaṅkha*-Conch; *cakra* - Discus; *gadā*- Mace; *padma* - Lotus)

While performing the *sandhyāvandanā* these 24 names of Lord are uttered as a part of other good actions. If the devotees and aspirants can contemplate the divine form of the Lord with these 4 weapons in the order given, it will elevate the aspirant to a very high level in the world of spiritualism. In this background the aspirants are very much graced by *Śrī Madhvācārya* by the enumeration of these 24 divine forms. **(the pictures of these 24 forms are given in Appendix-1, Picture-1)**

## THE GESTURES OF LIMBS AND HANDS

A mantra can give its full result when it is chanted with the memory of the sage, the metre and the God of that mantra, simultaneously performing the *aṅganyāsa* and

*karanyāsa.* Sage, metre and Gods of the mantras viz., *Vyāhṛtimantra, Nārāyaṇāṣṭākṣaramantra, Praṇavamantra, Vāsudēvadvādaśākṣaramantra* and *Brahmagāyatrī mantra* have been given. By bringing to light all the details regarding the *Mātṛkānyāsa, Puruṣasūkta* and 6-lettered Vishnumantra, *Śrī Madhvācārya* has shown clearly the method of the *upāsanā* of these mantras.

## *PŪJĀ* PADDHATI PROCEDURE OF WORSHIP

*Śrī* Hari who is immanent in the universe containing 24 fundamental principles is also present in its microform, the human body, as its controller. One should understand the greatness of Lord Hari through scriptures and contemplate on the greatness of the Lord present in the image or the heart during the worship. Only such contemplation is a real *pūjā*. *Śrī Madhvācārya* has described the procedure of the worship of Lord Hari in a condenced manner. *Śrī Jayatīrtha* has elaborated it in a work called '*Padmamālā*'. The procedure of worship may be presented here in a brief manner.

The devotee should worship the Lord everyday either in a *Maṇḍala* like *Cakrābja* or Bhadraka or in an immovable image or in any moving symbol like the guru or in '*Bhūsthṇḍila*'. First of all the supreme Lord *Śrī Nārāyaṇa* should be invoked by the *aṣṭākṣarī* (*OM Namō Nārāyaṇāya*). On the left side the chief *Vāyu* should be invoked and on the right all gods. Again all Gurus should be invoked on

the left side. *Garuḍa, Vyāsa, Durgā* and *Sarasvatī* should be respectively invoked in the lower region of the 4 corners (south, east etc.). On the upper region of the same the Gods of Dharma, *Jñāna, Vairāgya* and *Aiśvarya* should be mentally invoked and between that the presiding powers of their opposites namely Adharma, *Ajñāna, Avairāgya* and *Anaiśvarya* should be invoked and worshipped. *Nirṛti* is the god of Adharma, *Durgā* of *Ajñāna, Kāma* of *Avairāgya* and Rudra of *Anaiśvarya.* If they are not worshipped they bring Adharma etc. to the worshipper. Hence, they are given those names. Yama, *Vāyu, Śiva* and Indra are the presiding dieties of Dharma, *Jñāna, Vairāgya* and *Aiśvarya* respectively. One should meditate on the supreme Lord *Nārāyaṇa* and the supporting power Lakshmi present under the universe which is now assumed to be under the straight line at the centre of the *Pīṭha.* On the supporting power there is a Tortoise which is the locus of the universe. *Śēṣa* (the divine serpent) is on the tail of the Tortoise. The earth is on the hood of *Śēṣa.* The milky ocean is in the earth and in it there is an island called *Śvētadvīpa.* There is a diamond-studded large horn wherein on a quadrangular seat shines a lotus. The island, the hall and the lotus are the 3 forms of Lakshmi who has innumerable forms. In the 6 petals of the lotus one should contemplate on the sun, moon, fire, *Śrī, Bhū* and *Durgā.* In the lotus the 4 forms of the Lord viz., *Ātma, Antarātma, Paramātma* and *Jñānātma* should be meditated upon in the east, south, west and north

respectively. In the 8 petals of the lotus one should meditate on *vimalā, utkarṣiṇī, jñānā, kriyā, yōgā, prahvī, satyā* & *īśāna* and at the centre the power called *Anugrahā* should be meditated upon. All these are the forms of the Lord in the power called *Anugrahā* which is at the centre of the lotus. One should worship *Śeṣa* who is like the *yōgāsana* of Lord Hari. One should invoke Lord Hari in the image placed on the *yogapīṭha* and worship Him with arghya, *pādya*, *ācamana* and madhuparka. *Abhiṣēka* should be performed and the image should be decorated with clothes and ornaments. The sacred thread, proper seat, sandle paste and flowers should be offered to the Lord. **(see picture in Appendix 1, picture - 2)**

## ĀVARAṆAPŪJĀ

*Lakṣmīdēvī* and *Bhūdēvī* should be worshipped on the left and right sides of *Śrī* Hari. Then as a 2nd sheath the 4 forms called *Kṛddhōlka*, *Mahōlka*, *Vīrōlka* and *Dūlka* should be worshipped in the 4 directions (east etc.). The form of *Sahasrōlka* also called astra should be meditated upon in the corners like the south-east.

Then as the 3rd sheath *Vāsudēva*, *Saṅkarṣaṇa*, Pradyumna and Aniruddha should be worshipped in the east etc. Then as the 4th sheath the 12 forms (*Kēśava* etc.) should be meditated upon taking two for each main directions and one each for the corners. In the outer skirts of the 12 *mūrtis* one should worship the 12 forms viz.,

Matsya, *Kūrma*, *Varāha*, *Nārasiṃha*, *Vāmana*, *Paraśurāma*, *Rāma*, *Kṛṣṇa* Buddha, Kalki, Ananta and *Viśvarūpa* in order described above. Then as the 6th sheath *Śēṣa*, Brahma, *Vāyu* and Rudra should be worshipped in the 4 directions. *Garuḍa* should be worshipped in front of the Lord. On his left side *Suparṇi* should be worshipped and in the 4 corners *Vāruṇi*, *Gāyatrī*, *Bhāratī* and *Girijā* should be worshipped. In the 7th sheath the 8 governors of the directions, Indra etc., should be meditated upon. Brahma and *Śēṣa* who are the Lords of the lower directions should be meditated upon with their wives, retinue etc.**(see the picture regarding *āvaraṇapūjā* in Appendix 1, Picture 3 & 4)**

Then incense, light etc., should be offered and finally *naivēdya* should be offered with the *mūlamantra* called *Aṣṭākṣarī*. Similarly the Lord should be worshipped in the sacred fire and the *Hōma* should be performed everyday. The offering of the flowers and *hōma* should be performed 108 times with the *aṣṭākṣarīmantra*. For the other mantras, offerings of flowers is once and the *hōma* 4 times. Then the *naivēdya* should be removed and worship performed 3 times with the *aṣṭākṣarī*. Incense and light should be offered and the worship repeated. The *mūlamantra* should be repeated 108 times while meditating on Lord Hari. Again Lord Hari who is supreme and the master of the world should be meditated upon.

No good deeds like chanting of the sacred names,

worship, sacrifices and performance of *yāgas* can save a devotee from the hell unless he possesses the knowledge of the supremacy of Lord Hari. The knowledge that Hari is the highest diety should be confirmed with this background. Devotion towards gods like Brahma and Rudra should always be accompanied by the awareness that they are the subordinates and retinue of Lord Hari. One should know that Lord Hari alone is independent and perfect. One should meditate on Him with pure devotion being aware that He is worshipped by Brahma, Rudra etc. By such meditation emancipation is easily available to true devotees.

## ESSENCE OF THE SECOND CHAPTER

It is necessary to do the *Tattvanyāsa* and *Mātṛkānyāsa* whenever a mantra is taken up for Japa. *Mātṛkānyāsa* has the background of contemplating on God in 51 places in the human body. The 51 places may be enumerated as follows :

| | | |
|---|---|---|
| 1 | - | top of the forehead |
| 2 | - | face |
| 3&4 | - | eyes |
| 5&6 | - | ears |
| 7&8 | - | nostrils |
| 9&10 | - | the left and the right cheeks |
| 11&12 | - | lips |
| 13&14 | - | the rows of the teeth |

| | | |
|---|---|---|
| 15 | - | head |
| 16 | - | mouth |
| 17-26 | - | the joints of fingers and tips |
| 27-36 | - | the joints of toes and tips |
| 37&38 | - | two sides of the belly |
| 39 | - | back of the belly |
| 40 | - | genitals |
| 41 | - | lower belly |
| 42 | - | heart |
| 43-49 | - | the seven elements of the body (dhatus) |
| 50 | - | vital air |
| 51 | - | life |

In this manner the *Mātṛkānyāsa* should be performed in the body and the image. This mantra japa becomes the cause of invoking the supreme Lord's presence in the body and the image.

## A HUNDRED FORMS WHICH SHOULD BE CONTEMPLATED IN THE *KALAŚA*

The *Śāstras* prescribed *abhiṣēka* with the water of the *kalaśa* for worship and installation of the God's images. The hundred divine forms are the following -

Starting from *aja* upto *narasimha* who is the presiding diety of the letter '*kṣa*', there are 51 forms. In addition to this there are 24 forms in the list starting with

Keshava. There are 8 forms called *ātma*, *antarātma*, *paramātma*, *jñānātma*, *vāsudēva*, *saṅkarṣaṇa*, pradyumna and aniruddha. In addition to this there are 17 viz., *viśva*, *taijasa*, *prājña*, *turīya*, *kūrma*, *varāha*, *nārasiṃha*, *vāmana*, *paraśurāma*, *rāma*, *vyāsa*, *kṛṣṇa*, *dattātrēya*, buddha, kalki and *śiṃśumāra* (51+24+8+17=100). When *abhiṣēka* is performed with contemplation on these forms the divine presence is invoked.

## HOMAVIDHI

*Hōma* is performed to get rid of the physical or mental troubles caused by any reason. It may also be performed for long life, fame, prosperity, peace and manifestation of one's potential more than anything else. Thousand, ten thousand, one hundred thousand or a million or ten million offerings may be made in fire which is a symbol of God for the pleasure of Lord Vishnu. An altar or *yajñakuṇḍa* with three *daṇḍas* has to be prepared. If the upper portion of the *kuṇḍa* is one cubit high, the depth should also be the same. A way for offering the holy material should be provided on the upper part of the *hōmakuṇḍa* in the form of a peepul leaf. It should be 12 inches long. Meditating on *Śrī* Hari, the Lord of *Ramā*, fire which represents Lord Vishnu's power should be installed in the *hōmakuṇḍa* with proper mantras. The *āhutī*s should be offered with *vyāhṛtis*. The 16 *saṃskāras* should be performed to the fire with the mantras of the *Puruṣasūkta* and Lord Hari should be

worshipped as present in the sacred fire. **(see picture 5 in Appendix 1, for the procedure of preparing of the *hōmakuṇḍa*)**

The materials for the homa are - ghee, milk pudding, peepul twigs, sesamum, rice, trimadhura which is a mixture of ghee, honey & milk and the twigs of the *palāśa* tree. One should perform the karmans for pleasing Lord Hari and it should be offered to the Lord. The priests invited for performing the sacrifice and the gurus should be given suitable fees.

## ESSENCE OF THE THIRD CHAPTER

### FEATURES OF THE IMAGE

A wise man who desires to conduct the installation of Vishnu should get an image of Vishnu made of stone, metal, wood or mud as per the *śāstras.* The size of the image should be 96". The image could have the posture of sitting in the *yōgāsana* or of standing or of reclining on the serpent *Śēṣa* or in an instructing posture with the gesture called *jñānamudrā.* The stone is of three types viz., masculine, feminine & neuter. The Sculptor should examine the stone for the image which should be situated in a clean place and environment.

The six materials which are suitable for making an image of God are precious stone, metal, stone, mud, wood and crystal. A stone of masculine nature is the most

suitable for making an image. Images made of gold, silver or copper are said to be most proper for worship.

## EXAMINATION OF THE STONE

The stone should be softly hit with a chisel and the nature of the stone should be decided on the basis of the sound produced. Masculine stone should be used for making images, the feminine stone for the pedoestal and the neuter stone for the *pāṇipīṭha.*

If a stone gives the experience of heat when it is touched, it should be understood as a pregnant stone. There is the possibility of the existence of living creatures inside it. A stone in which invisible creatures are present should not be used for making images. When hit with the chisel a masculine stone emits the sound of a bell. If the sound is very unclear, the stone should be recognized as a feminine stone. A stone which does not emit any sound at all is a neuter stone.

**Size of the limbs of the image**

| | | |
|---|---|---|
| head above the forehead | - | 2" |
| beautiful face | - | 9" |
| round neck | - | 3" |
| chest | - | 6" |
| from the chest upto the navel | - | 15" |
| from the navel upto testicles | - | 10 1/2" |
| the area of the testicles | - | 2" |

from the testicles to the anus - 2"
from the testicles to the knee - 18"
length of the knee - 2"
from the knee up to the foot - 22"
from ankle to the sole - 4 1/2"

**Total** **96"**

**(see picture 6 Appendix 1 for the size of the image)**

**Size of the foot**

back side from the sole upto
the ankle - 6"
centre portion of a foot - 3 1/2"
tip of the foot - 2"
the foot thumb & the next toe - 3"
the middle toe - 2 1/2"
the fourth toe - 2 1/4"
the small toe - 1 1/2"
length of the foot thumb nail - 3/4"
nail of the next toe - 3/8"
middle toe nail - 9/32"
fourth toe nail - 27/128"
the small toe - 81/512"

The nails of the foot toes should be charming and red.

the width of the front foot - 6"
the circumference of the foot thumb - 4"
the circumference of the next toe - 3"

| | |
|---|---|
| the circumference of the middle toe | - 2 5/6" |
| the circumference of the fourth toe | - 2 2/3" |
| the circumference of the small toe | - 2 1/2" |

**Size of the leg and thigh**

| | |
|---|---|
| the circumference of the lower leg | - 10" |
| the circumference of the middle leg | - 13" |
| the circumference of leg belw the knee | - 17" |
| the circumference of the knee | - 18" |
| the circumference of the lower thigh | - 18" |
| the circumference of the middle thigh | - 24" |
| the circumference of the upper thigh | - 28" |
| the circumference of the penis | - 3 1/2" |
| length of the penis | - 4 1/2" |
| length of the testicles | - 4" |
| the circumference of the testicles | - 7" |

The thigh etc. should be round.

| | |
|---|---|
| the circumference of the waist | - 38" |

The hips should be sculpted in a round shape. All limbs should be well developed and handsome. The waist should be thin. The feet should be fixed on the pedestal firmly.

| | |
|---|---|
| the circumference of the belly below the navel | - 39" |
| depth of the navel | - 1 1/2" |
| the internal navel hole | - 1/2" |

The navel should be round. On its right side there should be a whirl.

| | |
|---|---|
| the circumference of the middle portion | - 42" |
| the circumference of the chest | - 19" |
| width of the chest with arms | - 29 1/4" |
| width of each shoulder | - 8" |
| height from the armpits to the shoulder | - 7" |
| length of the arms | - 38" |
| the circumference of the upper arm | - 18" |

It should taper of and at the end should have the circumference of 8 1/2"

Size of the palm and fingers

The length of the hand from the wrist to the tip of the middle finger is 9 1/2"

The length of the palm and that of the middle finger should be equal ; in other words each should be 4.75" long.

The width of the palm should also been 4.75"

The index finger and ring finger should be half inch shorter than the middle finger. In other words their length is 4.25"

The small finger is 1 1/2 shorter than the middle finger. Hence its length is 3 1/4"

The thumb is a bit longer than the small finger. Its length is 3 7/12"

The circumference of the middle finger and the thumb 3 1/2"

The circumference of the index finger and ring finger 3"

The circumference of the small finger 2 1/2"

Except the thumb all other fingers have a smaller circumference at the tip compared to the root by 1/4". The circumference of the thumb is the same at the root and at the tip. The circumference of the neck is equal to the width of the chest. It should be 19". There should be three horizantal lines on the forehead, the neck and the belly. The neck, arms, breasts and fingers should be round. The palms of the hand, the soles of the feet and the nails should be red. The sides of the eyes, the lips and the tongue should also be red.

**Size of the finger nails**

| | |
|---|---|
| length of the thumb's nail | - 4/3" |
| length of the middle finger's nail | - 1/2" |
| length of the nail of the index finger & ring finger | - 3/8" |
| length of the small finger's nail | - 1/4" |

The area from the tip of the nose upto the chin, the nose and the forehead should be of the same size. The length of each of these is 3"

When the nose is also included the length of the face is 9 1/2"

| | | |
|---|---|---|
| width of the mouth | - | 4" |
| height of the lower lip | - | 1/2" |
| height of the upper lip | - | 1/3" |
| from the upper lip upto the nose | - | 1/2" |
| from the lower lip upto the chin | - | 1 1/2" |
| the length of the sides from the mouth to the ear | - | 6" |
| length of the sides from the nose upto the ear | - | 7" |
| The height of the nose | - | 1 1/4" |
| height of the nostrils | - | 1/2" |
| length of the mid-nose | - | 1/2" |
| size of the tip of the nose | - | 1/3" |
| length of the eyes | - | 3" |
| width of the eyes (when wide open) | - | 1" |
| width of the eyes (normal) | - | 1/2" |
| length of the brows | - | 4" |
| width of the brows | - | 1/2" |

The brows should not touch each other but they should be near to each other. The lashes of the eyes should be black.

| | | |
|---|---|---|
| length of the ear | - | 3" |

width of the ear - 2 1/2"
(ear rings should also be carved)
The length of the cavity of the ear - 3 1/2"
width of the inner ear - 2"

Ornament called karnapoora and blue lotuses should be carved in the ears.

Abundant wavy and curly hair should the carved on the head. The forehead should be broad. The length and breadth of the head should be 9 1/2". The head should be round and high in the centre like an umbrella.

**ORNAMENTS AND THE WEAPONS .**

The dark black long hairs of Sri Hari are wavy at the tips. His crown should have the size of 9" as the face. The ear ornament should be shaped like a crocodile. The Gem Kaustubha should appear on the chest. On the right side of the chest there should be a sign called *Śrī*vatsa. A necklace of pearls, golden ornaments and the sacred thread should appear on the chest. Bracelets, bangles and other ornaments should adorn *Śrī* Hari's arms. He should wear an yellow silken cloth on the waist. A girdle should appear. There should be anklets on the legs and rings on the toes. The expert sculptor should carve these according to the tenets of sculpture. An upper garment on the shoulders and weapons like the discus in the hands should be shown. The image should have well-formed teeth and exhibit a smile. The teeth should not be protruding. The

view should be straight. On the whole the image should be nice and charming.

A person desirous of bringing the stone for the image should proceed with the sound of five musical instruments. He should be carrying auspicious items while walking to the sacred place. There he should examine the stone after recognising hollowness of the stone by its sound. He should discard it. When a stone is found acceptable after examination he should stay there for a night fasting and meditating on Vishnu, uttering the *mūlamantra.* If the image is to be made with wood, it should be made with the pith of trees suitable for sacrifices. Before lifting the stone or rock '*Baliharaṇa*' (offering of food to various deities) should be performed. *Naivēdya* should be offered to *Śrī* Hari with the *mūlamantra* and bali should be offered in all the eight directions with mantras like '*prācyēbhyō viṣṇubhūtēbhyō namaḥ*', '*dākṣiṇēbhyō viṣṇubhūtēbhyō namaḥ*'. The tree or rock should be cut for the image of God after obtaining permission from the servants of Vishnu, the lords of directions and *Śrī* Hari.

There are three types of rocks which are called masculine, feminine and neuter. These can be recognized from the difference of tone or sound of the rock. The masculine stone should be used for making icons, the feminine stone for the pedestal and the neuter stone for the support. This has been dealt with already. The icon

made by the sculptors should be brought with the accompaniment of the vedic chantings and the sounds of auspicious instruments of music.

**THE PLACE FOR THE BUILDING OF A TEMPLE**

A place where water flows away to the east, or the north, is suitable for building a temple. On the south and west sides, the earth should be elevated. The area for the temple could be on the top of a hill or at the centre of a town or a capital city or at the centre of a big pond. There should be no possibility of stagnation of water around the temple. It should be far away from burial grounds and such other places. A site which is not less than 12 kishkus should be chosen for the temple in a congenial environment. (The kishku is roughly equal to 42 feet)

The area for the temple may be as large as 24 or 48 or even 100 kishkus. The ground should be checked to see that there does not exist hair, bone, ant hill or rock within it. Lord Hari should be worshipped again and Baliharana should be performed as described earlier. A temple may afterwards be constructed with mud, wood, stone and metal. The construction should be very strong.

When the measurements of an icon have to be decided the centre line on the thumb should be taken as one angula(inch) and the icon should be 96 angulas tall. If the angula is smaller the icon will also be small. If it is

of medium size the icon will also be of medium size. If the angula is big the icon will also be big. The small icon is called *hrasvapratimā* and one that is upto 24 inches is called *madhyapratimā* and a life size icon is called *uccapratimā*.

## DESIGN OF THE SANCTUM SANCTORUM

The door of the Sanctum Sanctorum should be 1 1/2 time bigger than the God's icon. The width of the door should be half of its height. The height of the pedestal should be half of the height of the icon.

The stone below the pedestal may be 4, 3 or 2 angulas thick taking its measurements from the thumb of the icon. Above the icon, there should be space equal in height to an icon. The ground should have elevation from the walls upto the centre gradually. If the Sanctum Sanctorum has only one storey the tower should be of the same size as the icon. There is a school which maintains that the tower may be half of the icon's size. The area between the icon and the wall may be equal to the height of the icon or 1 1/2 times that or even 2 times. If the Sanctum Sanctorum has 2 storeys the wall of the 2nd storey may also be as tall as the icon or 1 3/4 or 1/2 or 1 1/2. The Sanctum Sanctorum may be circular or it may resemble a lotus. It may be rectangular or square or may have 8 octagons. If the temple has multi towers the total height may be 10 times or 20 times the height of the icon. The last tower

should be round and resemble the crown. **(see picture 7, Appendix 1 for the plan of a temple)**

## DETAILS OF THE HALL, ENTRANCE DOOR, COMPOUND ETC.

A hall may be constructed adjacent to the Sanctum Sanctorum. It may also be built separately. One, two or three halls may be built depending on the resources. The entrance door may be decorated with a beautiful *gōpura*. Around the temple a compound may be constructed or it may be constructed separately. Depending on the financial resources, 2 or 3 *maṇṭapas* may be got constructed. The main gate may be decorated with beautiful *gōpura* (arches). A compound of just one wall or a multi-compound with 7 surrounding walls may be built. The picture of the seven walled temple and that of the *gōpura* may be seen in **picture No.8, Appendix 1**.

The wall encovering the temple may be either round shaped or square shaped. If the *mukhamaṇṭapa* is constructed apart from the Sanctum Sanctorum, it should be 2 cubits away from the Sanctum Sanctorum. The 2nd *maṇṭapa* should again be 2 cubits away from the first and 3rd *maṇṭapa* should be 3 cubits away from it. Around the temple the *maṇṭapas* for Gods like Indra should be constructed with the measurement of 6 hastas. A fine *maṇṭapa* should be constructed for the installation of the original image.

